# ಅಸ್ಪೃಶ್ಯತೆಯ ಕಲಂಕ

(ಮಹಾತ್ಮಾ ಗಾಂಧಿಯವರ ವಿಚಾರಗಳು.)



ಕರ್ನಾಟಕ ಶಿಕ್ಷಣ ಸಮಿತಿ,

ಧಾರವಾಡ.

ಕರ್ನಾಟಕ ಶಿಕ್ಷಣ ಸಮಿತಿಯ ೨೫ನೆಯ ಗ್ರಂಥ

# ಅಸ್ಪೃಶ್ಯತೆಯ ಕಲಂಕ

## (ಮಹಾತ್ಮಾ ಗಾಂಧೀಯವರ ವಿಚಾರಸಂಗ್ರಹ)

*"If God were to tolerate Untouchability*
*I would not recognise him as God at all"*

"ಪರಮಾತ್ಮನು ಅಸ್ಪೃಶ್ಯತೆಯನ್ನು ಒಪ್ಪುತ್ತಿದ್ದರೆ
ನನ್ನ ಪಾಲಿಗೆ ಅವನು ಪರಮಾತ್ಮನೇ ಅಲ್ಲ"

ಲೋಕಮಾನ್ಯ ಟಿಳಕರು.

ಸಂಗ್ರಾಹಕರು:

**ಪಾಟೀಲ ಕಲ್ಲನಗೌಡರು,** ಬಿ. ಎ.

**೧೯೩೪ನೆಯ ಫೆಬ್ರುವರಿ.** **ಬೆಲೆ ೮ ಆಣೆಗಳು.**

ಮುದ್ರಕರು:
ಬಳವಂತ ನಾರಾಯಣ, ಬಾಗಲವಾಡಿ
ಮೋಹನ ಮುದ್ರಣಾಲಯ,
ಧಾರವಾಡ.



ಪ್ರಕಾಶಕರು:
ಸು. ಶಿ. ದೇಸಾಯಿ ಎಂ. ಏ.
ಕಾರ್ಯದರ್ಶಿ ಕರ್ನಾಟಕ ಶಿಕ್ಷಣ ಸಮಿತಿ,
ಧಾರವಾಡ.

# ಮುನ್ನುಡಿ

ರೋಗಜಂತುಗಳಿಗೆ ವಶವಾದ ಶರೀರವು ದುರ್ಬಲವಾಗಿ ಯಾವ ಮಹತ್ಕಾರ್ಯವನ್ನೂ ನೆರವೇರಿಸಲು ಅಸಮರ್ಥವಾಗಿರುವುದು. ಹಿಂದು ಸಮಾಜದ ಸ್ಥಿತಿಯಾದರೂ ಹಾಗೆಯೇ ಆಗಿರುವುದು. ಅಸ್ಪೃಶ್ಯತೆಯ ವಿಷಜಂತು ಹಿಂದುಸಮಾಜದ ಅಂಗಾಂಗಗಳಲ್ಲಿ ಸೇರಿ ಅದರ ಜೀವನರಸ ವನ್ನೇ ಹೀರುತ್ತಲಿರುವುದು. ಈಗಂತು ಹಿಂದುಸಮಾಜದ ದುರ್ಬಲತೆ ಮಿತಿಮೀರಿ ಹೆಚ್ಚಿರುವುದರಿಂದ ಅದಕ್ಕೆ ಆತ್ಮವಿಸ್ಮರಣೆ ಉಂಟಾಗಿರು ವುದು. ಉತ್ಸಾಹವು ಎಂದೋ ಅಳಿದಿರುವುದು; ಕಾರ್ಯಶಕ್ತಿ ಎಂದೋ ಕುಗ್ಗಿರುವುದು. ಇನ್ನು ಹಿಂದುಸಮಾಜವು, ಹಿಂದುಧರ್ಮವು, ಉಳಿ ವುದೋ ಇಲ್ಲವೋ ಎಂಬ ಭೀತಿ ಒದಗಿರುವುದು. ಆದರೆ ಅತ್ಯುಗ್ರ ತಪ ಸ್ಸನ್ನಾಚರಿಸಿ ಶ್ರೇಯಸ್ಕರವಾದ ತತ್ವಗಳನ್ನು ಕಂಡುಹಿಡಿದು, ಅವನ್ನು ಆಚರಿಸಿ, ನೀತಿಯ ಪ್ರಭಾವವನ್ನೂ ಧರ್ಮದ ಮಹಿಮೆಯನ್ನೂ ಅಖಿಲ ಜಗತ್ತಿಗೆ ತೋರಿಸಿ ತನ್ನ ಮಹತ್ವವನ್ನು ಪ್ರಸ್ಥಾಪಿಸಿದ ಹಿಂದುಧರ್ಮ ದಲ್ಲಿ ಸ್ವಸಂರಕ್ಷಣದ ಶಕ್ತಿಯಾದರೂ ಗೂಢವಾಗಿ ಇರದೆ ಇಲ್ಲ. ಆ ಶಕ್ತಿ ಇರುತ್ತಿದ್ದುದರಿಂದಲೇ ಕಾಲಕಾಲಕ್ಕೆ ರಾಮ, ಕೃಷ್ಣ, ಬುದ್ಧ, ಚೈತನ್ಯ, ರಾಮಕೃಷ್ಣಪರಮಹಂಸ, ಇವರಂತಹ ಮಹಾ ಪುರುಷರು ಹಿಂದುದೇಶದಲ್ಲಿ ಅವತರಿಸಿ ಧರ್ಮೋದ್ಧಾರದ ಮಹತ್ಕಾರ್ಯವನ್ನು ನೆರವೇರಿಸಿದರು. ಆ ಶಕ್ತಿ ಇರುತ್ತಿದ್ದುದರಿಂದಲೇ ಮೋಹನದಾಸ ಗಾಂಧಿಯವರಂತಹ ಮಹಾತ್ಮರು ಹಿಂದುಧರ್ಮದಲ್ಲಿ ಜನ್ಮವೆತ್ತಿ ಈಗ ಅದರ ಉದ್ಧಾರದ ಕಾರ್ಯವನ್ನು ಹಗಲಿರುಳೆನ್ನದೆ ಅವಿಶ್ರಾಂತವಾಗಿ ಮಾಡುತ್ತಿರುವರು. ಹಿಂದುಸಮಾಜಕ್ಕೆ, ಹಿಂದುಧರ್ಮಕ್ಕೆ ಧನ್ವಂತರಿ ದೊರೆತಿರುವರು. ಇನ್ನು ಗಂಡಾಂತರದ ಭೀತಿ ಇಲ್ಲ. ಇರುಳು ನೆಸ್ಸ ಗಳು ಎಷ್ಟು ಕೂಗಿಕೊಂಡರೂ ಪ್ರಭಾತಕ್ಕೆ ತಡೆಯುಂಟಾಗದು!

ಹಿಂದುಸಮಾಜದಲ್ಲಿ ಆಗಾಗ ಅವತರಿಸಿದ ಸಾಧುಪುರುಷರೆಲ್ಲರೂ ಆ ಸಮಾಜಕ್ಕೆ ಅಂಟಿಕೊಂಡಿರುವ ಅಸ್ಪೃಶ್ಯತೆಯ ವಿಷಜಂತುವನ್ನು ನಾಶಗೊಳಿಸಲು ಬಹಳವಾಗಿ ಹೆಣಗಿದರು. ಅವರ ಪ್ರಯತ್ನದ ಫಲ

ವಾಗಿ ಹಿಂದುಧರ್ಮದ ಸ್ವರೂಪವು ಆ ಆ ಕಾಲದಲ್ಲಿ ಕೆಲಮಟ್ಟಿಗೆ ಉಜ್ವಲವಾಗಿ ಪ್ರಕಾಶಿಸಿದರೂ ವಿಷಜಂತು ಸಾಯಲಿಲ್ಲ. ಈಗ ಮತ್ತೆ ಆ ಜಂತು ತಲೆಯೆತ್ತಿರುವುದು. ಆದರೆ ಈಗ ತಲೆಯೆತ್ತಿದ್ದುದು ಗಾಂಧಿಯವರು ಎತ್ತಿದ ಶಸ್ತ್ರಕ್ಕೆ ತುತ್ತಾಗಲು !

ಈ ಪುಸ್ತಕದಲ್ಲಿ ಮ. ಗಾಂಧಿಯವರು ಕಳೆದ ಹತ್ತು ಹನ್ನೆರಡು ವರ್ಷಗಳಿಂದ ಅಸ್ಪೃಶ್ಯತೆಯನ್ನು ಕುರಿತು ಹೇಳಿದ ಮತ್ತು ಬರೆದ ಮಾತುಗಳು ಸಂಗ್ರಹಿಸಲ್ಪಟ್ಟಿರುವುವು. ಗಾಂಧಿಯವರದು ಅಧಿಕಾರಯುಕ್ತವಾಣಿ, ಅಸಂದಿಗ್ಧವಾಣಿ, ಪ್ರಾಣಪೂರ್ಣವಾಣಿ, ಅವರದು ಅಮೃತಮಯವಾಣಿ, ಕಣ್ತೆರೆಯಲೊಲ್ಲದವರು ಬೇಕಾದರೆ ಬಿದ್ದುಕೊಂಡಿರಲಿ. ದೇಶವತ್ಸಲರೂ ಧರ್ಮವತ್ಸಲರೂ ಆ ವಾಣಿಯಿಂದ ಪ್ರವಾಹವಾಗಿ ಹರಿದುಬರುವ ಅಮೃತವನ್ನುಂಡು ಸಚೇತನರಾಗಿ ದೇಶ ಧರ್ಮಗಳ ಸೇವೆಗೋಸುಗ ಮುಂದುವರಿಯಲಿ.

ನನ್ನ ಪರಮ ಮಿತ್ರರಾದ ಶ್ರೀಮಾನ್ ಪಾಟೀಲ ಕಲ್ಲನಗೌಡರು ಗಾಂಧಿಯವರ ಮಾತುಗಳನ್ನು ಕನ್ನಡ ಬಾಂಧವರಿಗೋಸುಗ ಕನ್ನಡದಲ್ಲಿ ಅನುವಾದಿಸಿರುವರು. ಈ ಯುಗವು ಗಾಂಧಿಯುಗವು. ಗಾಂಧಿಯವರು ಉಚ್ಚರಿಸಿದ ಪ್ರತಿಯೊಂದು ಮಾತೂ ಪ್ರಾಣದಾಯಿಯಾಗಿರುವುದು. ಆದುದರಿಂದ ಶ್ರೀ. ಕಲ್ಲನಗೌಡರು ಅವರ ವಿಚಾರಗಳನ್ನು ಕನ್ನಡದಲ್ಲಿ ಅನುವಾದಿಸಿ ಕನ್ನಡಿಗರನ್ನು ಋಣಿಗಳಾಗಿಮಾಡಿರುವರು. ಶ್ರೀ. ಕಲ್ಲನಗೌಡರು ಗಾಂಧಿಯವರ ತತ್ವಗಳನ್ನು ಅರಿತು ಅವನ್ನು ತಮ್ಮ ಜೀವನಕ್ರಮದ ಅಡಿಗಲ್ಲಾಗಿ ಮಾಡಲು ಅವಿಶ್ರಾಂತವಾಗಿ ಪ್ರಯತ್ನಿಸುವ ಸಜ್ಜನರಲ್ಲಿ ಒಬ್ಬರು. ತಮ್ಮ ಈ ಪುಸ್ತಕದಲ್ಲಿಯ ಭಾಷೆ ಶುದ್ಧವೂ ಸರಲವೂ ಆಗಿರಬೇಕೆಂದೂ ಅನುವಾದವು ಪ್ರಮಾದರಹಿತವಾಗಿರಬೇಕೆಂದೂ ಅವರ ಆಕಾಂಕ್ಷೆ. ಅವರ ಆಕಾಂಕ್ಷೆಯೂ ಪ್ರಯತ್ನವೂ ಸಫಲವಾಗಿರುವುದೆಂಬುದು ಅಭಿನಂದನೀಯವಾದ ಮಾತು.

ಕರ್ನಾಟಕ ಹೈಸ್ಕೂಲ್
ಧಾರವಾಡ.
೨೨–೨–೧೯೩೪

**ಸಾಲಿ ರಾಮಚಂದ್ರರಾಯ.**

# ದಂಭದ ಮುಸುಕು.

ಏಸಿತು ದಂಭದ ಮುಸುಕು ಪಸರಿಸಿಹುದೋ ?।
ಜನವು ಸತ್ಯದ ಸೊಬಗ ಕಾಣದಿಹುದೋ ! ॥ ಪಲ್ಲವಿ ॥

ಹೊಲೆಯತನವೊಡಲಲ್ಲಿ ತುಂಬಿ ಸೊಗಡೊಡೆದಂತೆ।
ಕುಲವು ಕೊಳೆತಿರೆ ಹುಳಿತು, ಕುಲವು ಕುಲವೆಂದು।
ತಲೆಯಲ್ಲಿ ಹುಳು ಸೇರಿದಂತೆ ಕಿರಿಚುತಲಿ ಜನ-।
ನಲಿಯುತಿಹುದೆತ್ತಲೂ ಹಾದಿ ಬೀದಿಯೊಳು ! ॥ ೧ ॥

ಮದದ ಸೆಳೆತಕೆ ಸಿಲುಕಿ ಧರ್ಮಬುದ್ಧಿಯು ತೊರೆದು।
ಹೃದಯದಿಂದೀಶನನು ಹೊಡೆದಟ್ಟಿ ಹೊರಗೆ ॥
ಇದೊ ಧರ್ಮ ಸಂತ್ರಾಣಕರೆಂದು ಮೆರೆಯುತಲಿಹರು !।
ಎದೆಗಾರತನವದಕೆ ಸರಿ ಇಳೆಯೊಳಿಹುದೇ ? ॥ ೨ ॥

ಸೋಗಿನವೃದ್ಧ ಮಾತುಗಳನಾಡಿ ಧರ್ಮದ ತಿರುಳ।
ತಿಳಿದಂತೆ ನಟಿಸುತಿಹರಾತ್ಮವಂಚಕರು ! ॥
ಬೆಳಕಿನೊಳು ಕಣ್ಣು ಕುರುಡರಾಗಿ ಪಾಪದ ಕುಣಿಯ।
ಕೊಳಚೆಯೊಳು ಹುಳದಂತೆ ಜೀವಿಸುತಲಿಹರು ! ॥ ೩ ॥

— ನಾಲಿ ರಾಮಚಂದ್ರರಾಯರು



# ಎರಡು ಮಾತುಗಳು.

ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತಾ ನಿವಾರಣೆಯ ಸಂಬಂಧದಲ್ಲಿ ಮಹೋಪವಾಸವನ್ನು ಕೈಕೊಳ್ಳುವ ಪೂರ್ವದಲ್ಲಿಯ ಅವರ ವಿಚಾರಗಳನ್ನೆಲ್ಲ ಸಂಗ್ರಹಿಸಿ ಕನ್ನಡದಲ್ಲಿ ಪ್ರಕಟಿಸಬೇಕೆಂಬ ಆಶೆ ಇದ್ದಿತು. ದುರ್ದೈವದಿಂದ ಅನೇಕ ಅಡಚಣಿಗಳೊದಗಿ ಆ ಕಾರ್ಯವು ಪೂರ್ತಿಯಾಗದೆ ಉಳಿದಿದೆ. ಮಹಾತ್ಮರ ಕೆಲವು ವಿಚಾರಗಳನ್ನಾದರೂ ಪ್ರಕಟಿಸಲು ಕರ್ನಾಟಕ ಶಿಕ್ಷಣಸಮಿತಿಯವರು ಒಪ್ಪಿ ಆ ಕಾರ್ಯವನ್ನು ಪೂರ್ತಿಗೊಳಿಸಿದ್ದಕ್ಕಾಗಿ ನಾನು ಅವರನ್ನು ಅಭಿನಂದಿಸದಿರಲಾರೆ. ದೊಡ್ಡ ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂಬ ಯೋಜನೆಯಿಂದ ತಯಾರಿಸಿದ ಸಂಗ್ರಹದಲ್ಲಿ ಅನಿವಾರ್ಯ ಕಾರಣಗಳಿಂದ ಕೆಲವನ್ನು ತೆಗೆದುಹಾಕಿದ್ದಕ್ಕಾಗಿ ವಿಷಯ ಯೋಜನೆಯಲ್ಲಿ ಕೊರತೆಗಳುಂಟಾಗಿವೆ. ಪ್ರಸಂಗವು ಸಾಧಿಸಿದರೆ ಮತ್ತೊಮ್ಮೆ ಅದನ್ನು ಪೂರೈಸಲು ನನ್ನ ಆಶೆ ಇದೆ.

ಈ ವಿಚಾರಗಳನ್ನು ಅಚ್ಚಿಗಾಗಿ ತಯಾರಿಸುವ ಶ್ರಮದಲ್ಲಿ ಬಹುಭಾಗವು ಪಂಡಿತರಾದ ಶ್ರೀಮಾನ್ ಸಾಲಿ ರಾಮಚಂದ್ರರಾಯರಿಗೆ ಸಲ್ಲುವುದು. ಅದಕ್ಕೋಸುಗ ಅವರನ್ನು ನಾನು ವಂದಿಸದಿರಲಾರೆ. ಮುದ್ರಣಮಾಲಕರ ಉಪಕಾರವೂ ಮರೆಯದಂತಿದೆ.

'ಶಾಂತಿಕುಟೀರ' ಹಂಸಭಾವಿ.
೨೧-೨-೩೪.

ಪಾಟೀಲ ಕಲ್ಲನಗೌಡರು.

# ಅನುಕ್ರಮಣಿಕೆ

# ದುಸ್ತರವಾದ ಆತಂಕ.

ಅಸ್ಪೃಶ್ಯತೆ ನಮ್ಮ ಪ್ರಗತಿಯ ಮಾರ್ಗದಲ್ಲಿ ಒಂದು ದುಸ್ತರವಾದ ಆತಂಕವು. ಅತ್ಯಂತ ಪರಿಶ್ರಮದಿಂದ ಅದನ್ನು ನಾವು ದೂರಮಾಡಲಿಕ್ಕೆ ಬೇಕು. ಅಸ್ಪೃಶ್ಯತೆ ನಮ್ಮಲ್ಲಿ ಇದ್ದರೂ ನಾವು ಸ್ವರಾಜ್ಯವನ್ನು ಪಡೆಯಬಹುದೆಂದು ನಮ್ಮಲ್ಲಿ ಅನೇಕರು ತಿಳಿದುಕೊಂಡಂತೆ ತೋರುತ್ತದೆ. ಆದರೆ ಈ ವಿಚಾರದಲ್ಲಿ ಅಡಗಿರುವ ವಿರೋಧವನ್ನು ಅವರು ಕಾಣರು. ಸ್ವರಾಜ್ಯವು ಸ್ಪೃಶ್ಯರಂತೆ ಅಸ್ಪೃಶ್ಯರಿಗೂ ಇರುವುದು. ನಾರಾಯಣವರಂ ಪಟ್ಟಣದಿಂದ ಒಬ್ಬರು ಬರೆವುದೇನಂದರೆ:— "ನಮ್ಮ ಭಾಗದಲ್ಲಿ ಹಿಂದುಗಳು, ಅವರಲ್ಲಿಯೂ ಬ್ರಾಹ್ಮಣರು ಪಂಚಮರನ್ನು ಅತ್ಯಂತ ಹೀನರೀತಿಯಿಂದ ನಡೆಯಿಸಿಕೊಳ್ಳುತ್ತಾರೆ. ಬ್ರಾಹ್ಮಣ ವಸತಿಗಳಲ್ಲಿ ಅವರು ಹಾಯಲೂ ಕೂಡದು. ಬ್ರಾಹ್ಮಣರೊಡನೆ ಮಾತಾಡುವಾಗ ಅವರು ದೂರದಲ್ಲಿ ನಿಲ್ಲಲಿಕ್ಕೆ ಬೇಕು." ಮೇಲಿನ ವಾಕ್ಯದಲ್ಲಿ 'ಬ್ರಾಹ್ಮಣರು' ಎಂಬಲ್ಲಿ 'ಆಂಗ್ಲರು', ಮತ್ತು 'ಪಂಚಮರು' ಎಂಬಲ್ಲಿ 'ಭಾರತೀಯರು' ಎಂದು ಓದಿದರೆ ನಮಗೆ ಏನೆನಿಸಬಹುದು? ಆದರೂ ಎಷ್ಟೋ ಸಾಹೇಬರು ಅನೇಕ ಬ್ರಾಹ್ಮಣರಿಗಿಂತ ಎಷ್ಟೋ ಪಾಲು ಸಾಧುವೃತ್ತಿಯವರಾಗಿರುವರು. **ನಮ್ಮ ಬಂಧುಗಳನ್ನು ಕೇವಲ ಜನ್ಮದನೆವದಿಂದ ಬಹಿಷ್ಕೃತರೆಂದು ಎಣಿಸುತ್ತಿರುವವರೆಗೆ ನಮಗೆ ಸ್ವರಾಜ್ಯವು ದೊರೆಯದು.** ಯಾವನೊಬ್ಬ ಮನುಷ್ಯನ ಈಗಿನ ಸ್ಥಿತಿಗೆ ಅವನ ಹಿಂದಿನ ಕರ್ಮವು ಕಾರಣವೆಂದು ಜನರು ಹೇಳುವುದುಂಟು. ಆದರೆ ಪಾಪಿಯನ್ನು ಕಂಡೊಡನೆ ಅವನ ಮೇಲೆ ಕಲ್ಲನ್ನೆಸೆಯಲೇಬೇಕೆಂದು ನಮ್ಮ ಕರ್ಮವು ನಮಗೆ ಹೇಳದು. ಮನುಷ್ಯನನ್ನು ಬದುಕಿಸಲು ಧರ್ಮವಿರುತ್ತದೆ; ಕರ್ಮದ ಭಾರದ ಕೆಳಗೆ ಅವನನ್ನು ಒತ್ತಿಡಲು ಅಲ್ಲ. **ಕರ್ಮವು ಕೀಳ ಜಾತಿಯವನನ್ನು ದುಃಸ್ಥಿತಿಯಲ್ಲೇ ಇಡುವುದೆಂದು ನಾವು ತಿಳಿದರೆ ಕರ್ಮತತ್ವಕ್ಕೆ ವಿಪರೀತಾರ್ಥವನ್ನು ಮಾಡಿದಂತಾಗುವುದು.** ರಾಮನು ತನಗೆ ನಾವಿಗನಿಂದ ಮನ್ನಣೆ ದೊರೆತುದು ಭಾಗ್ಯವೆಂದು ತಿಳಿದನು. ತಮ್ಮ ದುರ್ದೈವಿಗಳಾದ

ಬಾಂಧವರನ್ನು ಪುರಸ್ಕೃತರಾಗಿ ಮಾಡಿದ ಮಹಾಪುರುಷರ ಉದಾಹರಣೆಗಳು ಹಿಂದು ಧರ್ಮದಲ್ಲಿ ಅನೇಕಾನೇಕವಾಗಿರುವವು. ಈಗಿನ ಹಿಂದುಗಳು ತಮ್ಮ ಪೂರ್ವದ ಮಹಾಪುರುಷರನ್ನು ಅನುಸರಿಸಬಾರದೋ? ಮತ್ತು ಹಿಂದು ಧರ್ಮಕ್ಕೆ ಕಲಂಕದಂತಿರುವ ಈ ಅಸ್ಪೃಶ್ಯತೆಯನ್ನು ಸಮೂಲವಾಗಿ ದೂರಗೊಳಿಸಬಾರದೋ?

---

## ನಾನು ಮತ್ತೊಮ್ಮೆ ಹುಟ್ಟುವದಾದರೆ—

( ಅಹಮ್ಮದಾಬಾದದಲ್ಲಿ ಅಂತ್ಯಜರ ಪರಿಷತ್ತಿನಲ್ಲಿ ೧೯೨೧ನೇ ಎಪ್ರಿಲ ೧೩-೧೪ನೇ ದಿವಸಗಳಲ್ಲಿ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣದ ಅಂಶ ).

ಅಸ್ಪೃಶ್ಯತೆಯನ್ನು ತೆಗೆದೊಗೆಯಲು ಪ್ರಯತ್ನಿಸುವವರನ್ನು ವಿರೋಧಿಸುವವರಿಗೆ ಅವರು ಹಾಗೆ ಮಾಡುವದು ಅನ್ಯಾಯವೆಂದು ಹೇಗೆ ತೋರಿಸಿಕೊಡಬೇಕೆಂಬುದು ನನಗೆ ತೋರದಾಗಿದೆ. ಅಂತ್ಯಜರನ್ನು ಮುಟ್ಟಿದರೆ ನಮಗೆ ಮೈಲಿಗೆಯಾಗುವದೆಂದೂ, ಆ ಮೈಲಿಗೆ ನಾವು ಸ್ನಾನಾದಿವಿಧಿಗಳನ್ನು ಮಾಡುವವರೆಗೆ ಹೋಗದೆಂದೂ, ಮತ್ತು ಅವಶ್ಯಕವಾದ ಸ್ನಾನಾದಿ ವಿಧಿಗಳನ್ನು ನಾವು ಮಾಡದಿದ್ದರೆ ಪಾಪವು ನಮಗೆ ಅಂಟಿಕೊಳ್ಳುವದೆಂದೂ ತಿಳಿದವರ ಮನಸ್ಸನ್ನು ಒಲಿಸುವದಾದರೂ ಹೇಗೆ? ಅವರ ಮುಂದೆ ನನ್ನ ನಿಶ್ಚಿತ ಮತಗಳನ್ನು ಮಾತ್ರ ಇಡಬಲ್ಲೆನು.

**ಅಸ್ಪೃಶ್ಯತೆ ಹಿಂದುಧರ್ಮಕ್ಕೆ ಅಂಟಿಕೊಂಡಿರುವ ಬಹು ದೊಡ್ಡಪಾಪ ಕಲಂಕವೆಂದು ನಾನು ಎಣಿಸುತ್ತೇನೆ.** ನನ್ನ ಈ ಅಭಿಪ್ರಾಯಕ್ಕೆ ದಕ್ಷಿಣ ಆಫ್ರಿಕೆಯ ಸತ್ಯಾಗ್ರಹದಲ್ಲಿ ನನಗೆ ದೊರೆತ ಕಟು-ಅನುಭವಗಳು ಕಾರಣವಾಗಿಲ್ಲ. ಒಂದು ಕಾಲದಲ್ಲಿ ನಾನು ದೇವನ ಅಸ್ತಿತ್ವದಲ್ಲಿ ಸಂಶಯವುಳ್ಳವನಾಗಿದ್ದೆನೆಂಬುದೂ ಕಾರಣವಲ್ಲ. ಕ್ರೈಸ್ತಧರ್ಮದ ಪುಸ್ತಕಗಳ ಅಭ್ಯಾಸದಿಂದ ಈ ವಿಚಾರವು ನನ್ನಲ್ಲಿ ಬಂದಿರುವದೆಂದು ಅನೇಕರು ತಿಳಿವರು. ಅದೂ ತಪ್ಪು. ಬೈಬಲ್ಲಿಗೆ ನಾನು ಮೋಹಿತನಾಗುವ ಮೊದಲೇ, ಅದರ ಪರಿಚಯವಾಗುವ ಮೊದಲೇ

ಅಥವಾ ಬೈಬಲ್ಲಿನ ಅನುಯಾಯಿಗಳಿಗೆ ಪರಿಚಯವಾಗುವ ಮೊದಲೇ ಈ ವಿಚಾರವು ನನ್ನಲ್ಲಿ ಬಂದಿರುವುದು.

ಈ ವಿಚಾರವು ನನ್ನಲ್ಲಿ ಉದಯಿಸಿದಾಗ ನನಗಿನ್ನೂ ಹನ್ನೆರಡು ವರುಷಗಳೂ ಆಗಿರಲಿಲ್ಲ. 'ಉಕಾ' ಎಂಬ ಭಂಗಿಯವನು ನಮ್ಮ ಮನೆಯ ಪಾಯಖಾನೆಗಳನ್ನು ಸ್ವಚ್ಛಮಾಡಲು ದಿನಾಲು ಬರುತ್ತಿದ್ದನು. ನಾನು ಅವನನ್ನು ಮುಟ್ಟಬಾರದೇಕೆ? ಮತ್ತು ಮುಟ್ಟುವುದರಿಂದ ದೋಷವೇನು? ಎಂದು ಆಗಾಗ ತಾಯಿಯನ್ನು ಕೇಳುತ್ತಿದ್ದೆನು. ಆಕಸ್ಮಾತ್ತಾಗಿ ಉಕಾನನ್ನು ಮುಟ್ಟಿದರೆ ನನಗೆ ಸ್ನಾನಮಾಡಲು ಹೇಳುತ್ತಿದ್ದರು. ಸ್ವಾಭಾವಿಕವಾಗಿ ತಾಯಿಯ ಅಪ್ಪಣೆಯನ್ನು ನಾನು ಮನ್ನಿಸಿ ಸ್ನಾನ ಮಾಡುತ್ತಿದ್ದೆನಾದರೂ ಅಸ್ಪೃಶ್ಯತೆಗೆ ಧರ್ಮದಲ್ಲಿ ಸ್ಥಾನವಿಲ್ಲವೆಂದೂ, ಸ್ಥಾನವಿರುವುದು ಅಶಕ್ಯವೆಂದೂ ನಾನು ಮುಗುಳುನಗೆ ನಗುತ್ತ ಹೇಳುತ್ತಿದ್ದೆನು. ನಾನು ಬಹು ಕರ್ತವ್ಯದಕ್ಷನೂ ಆಜ್ಞಾಧಾರಕನೂ ಆದ ಮಗನಾಗಿದ್ದರೂ ಈ ವಿಷಯವನ್ನು ಕುರಿತು ನನ್ನ ಮತ್ತು ತಂದೆತಾಯಿಗಳ ನಡುವೆ ಆಗಾಗ ಮನಸ್ತಾಪವಾಗುತ್ತಿದ್ದಿತು. ಮತ್ತು ನನ್ನ ವಿರೋಧವನ್ನು ಆದರಪೂರ್ವಕವಾಗಿ ವ್ಯಕ್ತಗೊಳಿಸದೆ ನಾನು ಇರುತ್ತಿರಲಿಲ್ಲ. ಉಕಾನನ್ನು ಮುಟ್ಟಿದರೆ ಪಾಪ ಬರುವದೆಂದು ತಿಳಿಯುವುದು ಸರ್ವಥಾ ಅಯೋಗ್ಯವೆಂದು ನಾನು ತಾಯಿಗೆ ಹೇಳುತ್ತಿದ್ದೆನು.

ಶಾಲೆಯಲ್ಲಿ ನಾನು ಅಸ್ಪೃಶ್ಯರನ್ನು ಆಗಾಗ ಮುಟ್ಟಬೇಕಾಗುತ್ತಿತ್ತು. ಹಾಗೆ ಮುಟ್ಟಿದ ಸಂಗತಿಯನ್ನು ಬಚ್ಚಿಡದೆ ತಾಯಿಗೆ ಹೇಳಿಬಿಡುತ್ತಿದ್ದೆನು. ಆಗ ತಾಯಿ ಯಾವನಾದರೊಬ್ಬ ಮುಸಲ್ಮಾನನನ್ನು ಮುಟ್ಟಿ ಬಿಡು; ನಿಮ್ಮ ಮೈಲಿಗೆ ಹೋಗುವದೆಂದು ಹೇಳುತ್ತಿದ್ದಳು. ತಾಯಿಯ ವಿಷಯದಲ್ಲಿ ನನಗಿದ್ದ ಆದರ ಮತ್ತು ಪೂಜ್ಯ ಬುದ್ಧಿಗಳಿಗೋಸ್ಕರ ಅವಳು ಹೇಳಿದಂತೆ ಮುಸಲ್ಮಾನನನ್ನು ಮುಟ್ಟುತ್ತಿದ್ದೆನು. ಆದರೆ ಹಾಗೆ ಮಾಡುವುದು ನನ್ನ ಧರ್ಮವೆಂದು ನಂಬಿ ನಾನು ಮುಟ್ಟಿ ಬರುತ್ತಿರಲಿಲ್ಲ. ಕೆಲವು ದಿವಸಗಳ ನಂತರ ನಾವು ಪೋರ ಬಂದರಕ್ಕೆ ಬಂದೆವು. ಅಲ್ಲಿ ನನ್ನ ಸಂಸ್ಕೃತ ಅಭ್ಯಾಸವು ಪ್ರಾರಂಭವಾಯಿತು. ನಾನಿನ್ನೂ ಇಂಗ್ಲಿಷ ಶಾಲೆಗೆ ಹೋಗಿರಲಿಲ್ಲ. ಅಣ್ಣನಿಗೂ ನನಗೂ ಸಂಸ್ಕೃತವನ್ನು

ಕಲಿಸಲು ಒಬ್ಬ ಬ್ರಾಹ್ಮಣ ಶಿಕ್ಷಕರು ನಿಯೋಜಿಸಲ್ಪಟ್ಟರು. ಅವರು ನಮಗೆ 'ರಾಮರಕ್ಷೆ'ಯನ್ನೂ 'ವಿಷ್ಣುಪಂಜರ'ವನ್ನೂ ಕಲಿಸಿದರು. ಆಗ ನಾನು ಕಲಿತ 'ಜಲೇ ವಿಷ್ಣುಃ, ಸ್ಥಲೇ ವಿಷ್ಣುಃ (ನೀರಲ್ಲಿಯೂ ವಿಷ್ಣುವಿರುವನು, ನೆಲದಲ್ಲಿಯೂ ವಿಷ್ಣುವಿರುವನು.) ಎಂಬುದನ್ನು ನಾನಿನ್ನೂ ಮರೆತಿಲ್ಲ. ಆಗ ನಾನು ಬಹಳ ಅಂಜುಬುರುಕನಾಗಿದ್ದೆನು. ರಾತ್ರಿಯಲ್ಲಿ ದೀಪಗಳನ್ನಾರಿಸಿದ ಬಳಿಕ ದೆವ್ವ ಭೂತಗಳ ಕಲ್ಪನೆಯಿಂದ ಹೆದರಿ ಬಿಡುತ್ತಿದ್ದೆನು. ನನ್ನ ಸ್ಥಿತಿಯನ್ನರಿತ ನೆರೆಮನೆಯ ಮುದುಕಿಯೊಬ್ಬಳು ನನ್ನ ಅಂಜಿಕೆಯನ್ನು ಕಳೆಯಬೇಕೆಂದು, ಅಂಜಿಕೆಯಾದಾಗೆಲ್ಲ ರಾಮರಕ್ಷೆ ಮಂತ್ರವನ್ನು ಜಪಿಸಿದರೆ ದೆವ್ವ ಭೂತಗಳು ಓಡುವವೆಂದು ನನಗೆ ಹೇಳಿದಳು. ನಾನು ಹಾಗೆ ಮಾಡುತ್ತಿದ್ದೆನು. ಅದರಿಂದ ನನ್ನ ಅಂಜಿಕೆಯು ಹೋಗುತ್ತಿದ್ದಂತೆ ನನಗೆ ತೋರಿತು. ಆ ರಾಮರಕ್ಷಾ ಸ್ತೋತ್ರದಲ್ಲಿ ಅಂತ್ಯಜರನ್ನು ಮುಟ್ಟುವುದು ಪಾಪವೆಂದು ಎಲ್ಲಿಯಾದರೂ ಬರೆಯಲ್ಪಟ್ಟಿದೆ ಎಂಬುದನ್ನು ನಾನು ನಂಬಲಿಲ್ಲ. ಅದರ ಅರ್ಥವನ್ನು ನಾನು ಆಗ ತಿಳಿದಿರಲಿಲ್ಲ; ತಿಳಿದಿದ್ದರೂ ಅರ್ಥಮರ್ಥವೇ; ದೆವ್ವಭೂತಗಳ ಅಂಜಿಕೆಯನ್ನು ನಾಶಮಾಡಬಲ್ಲ ರಾಮರಕ್ಷಾ ಸ್ತೋತ್ರವು ಅಂತ್ಯಜಸ್ಪರ್ಶದಿಂದ ಪಾಪವು ಬರುವದೆಂದು ಹೆದರಿಸಬಲ್ಲದೆಂದು ನಾನು ನಂಬಲಿಲ್ಲ.

ನಮ್ಮ ಮನೆಯಲ್ಲಿ ನಿತ್ಯವೂ ರಾಮಾಯಣದ ಪುರಾಣವಾಗುತ್ತಿತ್ತು. ಲಡ್ಡಾ ಮಹಾರಾಜರೆಂಬ ಬ್ರಾಹ್ಮಣರೊಬ್ಬರು ಆ ಪುರಾಣವನ್ನು ಹೇಳುತ್ತಿದ್ದರು. ಅವರಿಗೆ ಕುಷ್ಟ ರೋಗವಿದ್ದಿತು. ನಿತ್ಯವೂ ರಾಮಾಯಣವನ್ನು ಪಠಿಸುವದರಿಂದ ಅದು ಹೋಗುವದೆಂದು ಅವರ ನಂಬುಗೆಯಾಗಿತ್ತು. ಮತ್ತು ಅದರಂತೆ ಅದು ಹೋಯಿತು. ಈಗ ಅಸ್ಪೃಶ್ಯರೆಂದು ಕರೆಯಲ್ಪಡುವ ಜಾತಿಯಲ್ಲಿ ಹುಟ್ಟಿದವನೊಬ್ಬನು ಶ್ರೀ ರಾಮಚಂದ್ರರನ್ನು ಗಂಗಾನದಿಯನ್ನು ದಾಟಿಸಿದನೆಂದು ರಾಮಾಯಣದಲ್ಲಿ ಬರೆದಿದೆ. ಅದೇ ರಾಮಾಯಣವು ಅಸ್ಪೃಶ್ಯ ವರ್ಗದವರು ಅಪವಿತ್ರಾತ್ಮರು; ಅವರ ಸಂಪರ್ಕದಿಂದ ಮೈಲಿಗೆಯಾಗುವದು ಎಂದು ಹೇಳುವ ಬಗೆ ಹೇಗೆ? **ದೇವರನ್ನು ನಾವು ಪತಿತ ಪಾವನ ಮೊದಲಾದ ಶಬ್ದಗಳಿಂದ ಕರೆಯುತ್ತಿರುವ ಸಂಗತಿ ಹಿಂದು ಧರ್ಮದಲ್ಲಿ ಹುಟ್ಟಿದ**

**ಯಾವ ಮನುಷ್ಯನೇ ಆಗಲಿ ಅಪವಿತ್ರನೆಂದು ತಿಳಿಯುವುದು ಪಾಪಕರವೆಂಬುದನ್ನು ಸ್ಪಷ್ಟವಾಗಿ ಹೇಳುವದಿಲ್ಲವೋ ?** ಆದುದರಿಂದ ಹಾಗೆ ಹೇಳುವುದು ಮಹತ್ಪಾಪವೆಂದು ಮೇಲಿಂದ ಮೇಲೆ ಹೇಳಲು ನನಗೆ ಬೇಸರವೇ ಇಲ್ಲ. ನಾನು ಹನ್ನೆರಡು ವರ್ಷದವನಿರುವಾಗ ಈ ನನ್ನ ಅಭಿಪ್ರಾಯವು ಈಗಿನಷ್ಟೇ ದೃಢವಾಗಿದ್ದಿತೆಂದು ನಾನು ಹೇಳಲಾರೆನು. ಆದರೆ ಅಸ್ಪೃಶ್ಯತೆ ಎಂಬುದು ಪಾಪವೆಂದು ಆಗ ನಾನು ನಿಶ್ಚಯವಾಗಿ ತಿಳಿದಿದ್ದೆನು. ವೈಷ್ಣವರಿಗೋಸ್ಕರ ಮತ್ತು ಪುರಾಣಪ್ರಿಯರಿಗೋಸ್ಕರ ಈ ಕಥೆಯನ್ನು ನಾನು ಇಲ್ಲಿ ಹೇಳಬೇಕಾಗಿದೆ.

ನಾನು ಸನಾತನಿ ಹಿಂದುವಿರುವೆನೆಂದು ಸಾಧಿಸುತ್ತಿರುವೆನು. ಶಾಸ್ತ್ರಗಳನ್ನು ನಾನು ಏನೂ ತಿಳಿಯದೆ ಇಲ್ಲ. ನಾನು ಸಂಸ್ಕೃತ ಭಾಷಾ ಪಂಡಿತನಲ್ಲ. ವೇದಗಳ ಮತ್ತು ಉಪನಿಷತ್ತುಗಳ ಭಾಷಾಂತರವನ್ನು ಮಾತ್ರ ಓದಿರುವೆನು. ಆದುದರಿಂದ ನನ್ನ ಅಭ್ಯಾಸವು ಪಾಂಡಿತ್ಯದ ಸೂಕ್ಷ್ಮ ಅಭ್ಯಾಸವಲ್ಲ. ಅವುಗಳ ವಿಷಯದ ನನ್ನ ಜ್ಞಾನವು ಆಳವಾಗಿರುವದಿಲ್ಲ; ಆದರೆ ನಿಜವಾದ ಹಿಂದುವಿಗೆ ತಕ್ಕಂತೆ ಅವುಗಳನ್ನು ಅಭ್ಯಾಸಮಾಡಿರುವೆನು. ಮತ್ತು ಅವುಗಳ ಮರ್ಮವನ್ನು ತಿಳಿದಿರುವೆನೆಂದು ನನಗೆ ಅನಿಸುತ್ತದೆ. ಇಪ್ಪತ್ತೊಂದು ವರ್ಷದವನಾಗುವದರೊಳಗೆ ನಾನು ಅನ್ಯಧರ್ಮಗಳನ್ನು ಅಭ್ಯಾಸಿಸಿದ್ದೇನೆ.

ಒಂದು ಕಾಲದಲ್ಲಿ ಹಿಂದು ಮತ್ತು ಕ್ರಿಸ್ತಿ ಧರ್ಮಗಳ ನಡುವೆ ಹೊಯ್ದಾಡುತ್ತಿದ್ದೆನು. ಮನಸಿನ ಹೊಯ್ದಾಟವು ನಿಂತ ಬಳಿಕ ನನಗೆ ಹಿಂದು ಧರ್ಮದಿಂದಲೇ ಮುಕ್ತಿಯಾಗಬಲ್ಲದೆಂದು ಅನಿಸಿತು. ಅಂದಿನಿಂದ ಹಿಂದು ಧರ್ಮದಲ್ಲಿಯ ನನ್ನ ಶ್ರದ್ಧೆ ದಿನದಿನವು ಬೆಳೆಯಿತು ಮತ್ತು ಉಜ್ವಲವಾಯಿತು. .

**ಆಗಲೂ ನಾನು ಅಸ್ಪೃಶ್ಯತೆ ಹಿಂದುಧರ್ಮದ ಅಂಶವಾಗಿರಲಿಲ್ಲವೆಂದು ನಂಬಿದೆನು. ಅಸ್ಪೃಶ್ಯತೆ ಹಿಂದು ಧರ್ಮದ ಅಂಶವಾಗಿದ್ದರೆ ಅಂತಹ ಹಿಂದು ಧರ್ಮವು ನನಗೆ ಬೇಕಿರಲಿಲ್ಲ.**

ಹಿಂದು ಧರ್ಮವು ಅಸ್ಪೃಶ್ಯತೆಯನ್ನು ಪಾಪವೆಂದು ಎಣಿಸುವದಿಲ್ಲವೆಂಬುದು ನಿಜವು. ಶಾಸ್ತ್ರಗಳ ಅರ್ಥವು ಇದು ನಿಜವೋ ಅದು ನಿಜವೋ

ಎಂಬ ಚರ್ಚೆಯಲ್ಲಿ ನಾನು ತೊಡಗಲೊಲ್ಲೆನು. 'ಭಾಗವತ'ದೊಳಗಿನ ಇಲ್ಲವೆ ಮನುಸ್ಮೃತಿಯೊಳಗಿನ ಆಧಾರಗಳನ್ನು ಹೇಳಿ ನನ್ನ ಅಭಿಪ್ರಾಯವನ್ನು ಸ್ಥಿರಪಡಿಸುವದು ನನಗೆ ಕಠಿನವಾಗಬಹುದು. ಆದರೆ ಹಿಂದು ಧರ್ಮದ ತಿರುಳನ್ನು ಅರಿತಿರುವೆನೆಂದು ಎದೆತಟ್ಟಿ ಹೇಳಬಲ್ಲೆನು. **ಅಸ್ಪೃಶ್ಯತೆಗೆ ಇಂಬುಗೊಟ್ಟು ಹಿಂದುಧರ್ಮವು ಪಾಪವನ್ನು ಮಾಡಿರುವುದು. ಅದು ನಮ್ಮನ್ನು ನಿಕೃಷ್ಟ ಸ್ಥಿತಿಗಿಳಿದಿರುವುದು; ಮತ್ತು ನಮ್ಮನ್ನು ಸಾಮ್ರಾಜ್ಯದ ಅಸ್ಪೃಶ್ಯರಾಗಿ ಮಾಡಿರುವದು.** ಮುಸಲ್ಮಾನರಿಗೂ ನಮ್ಮ ಅಸ್ಪೃಶ್ಯತೆ ವಿಚಾರದ ಗಾಳಿ ತಗಲಿರುವುದು. ದಕ್ಷಿಣ ಆಫ್ರಿಕೆಯಲ್ಲಿ ಪೂರ್ವ ಆಫ್ರಿಕೆಯಲ್ಲಿ ಮತ್ತು ಕಾನಡಾ ದೇಶದಲ್ಲಿ ನಮ್ಮಂತೆ ಮುಸಲ್ಮಾನರೂ ಅಸ್ಪೃಶ್ಯರಾಗಿ ಎಣಿಸಲ್ಪಡುವರು. ಈ ಎಲ್ಲ ಅನಿಷ್ಟಕ್ಕೆ ಅಸ್ಪೃಶ್ಯತೆಯ ಪಾಪವೇ ಮೂಲವು.

ನನ್ನ ಮತವು ಹೀಗಿರುವದು:—**ಹಿಂದುಗಳು ಅಸ್ಪೃಶ್ಯತೆಯನ್ನು ತಮ್ಮ ತಮ್ಮ ಧರ್ಮದ ಅಂಶವೆಂದು ಬುದ್ಧಿಪೂರ್ವಕವಾಗಿ ತಿಳಿದಿರುವವರೆಗೆ, ಮತ್ತು ಹಿಂದು ಸಮಾಜವು ತನ್ನ ಬಂಧುವರ್ಗದ ಒಂದು ಭಾಗದವರನ್ನು ಮುಟ್ಟುವದು ಪಾಪವೆಂದು ಎಣಿಸುತ್ತಿರುವವರೆಗೆ ಸ್ವರಾಜ್ಯವು ನಮಗೆ ಸರ್ವಥಾ ದೊರೆಯದು.** ಯುಧಿಷ್ಠಿರನಿಗೆ ತನ್ನ ನಾಯಿಯನ್ನು ಬಿಟ್ಟು ತಾನೊಬ್ಬನೇ ಸ್ವರ್ಗಕ್ಕೆ ಹೋಗುವದು ಬೇಕಿರಲಿಲ್ಲ. ಹೀಗಿರುವ ಯುಧಿಷ್ಠಿರನ ವಂಶಜರು ಅಸ್ಪೃಶ್ಯರನ್ನು ಬಿಟ್ಟು ಸ್ವರಾಜ್ಯವನ್ನು ಪಡೆವ ಬಗೆ ಹೇಗೆ? ಯಾವ ಅಪರಾಧಗಳಿಗೋಸುಗ ಸರಕಾರವನ್ನು ನಾವು ಪೈಶಾಚಕ ವೃತ್ತಿಯದೆಂದು ಹಳಿಯುತ್ತಿರುವೆವೋ ಅಂತಹ ಯಾವ ಅಪರಾಧಗಳನ್ನು ನಾವು ನಮ್ಮ ಅಸ್ಪೃಶ್ಯಬಾಂಧವರ ವಿಷಯದಲ್ಲಿ ಮಾಡಿರುವದಿಲ್ಲ?

**ನಮ್ಮ ಬಂಧುಗಳನ್ನು ನಾವು ಕಾಲ್ಕೆಳಗೆ ಮೆಟ್ಟಿರುವ ಅಪರಾಧವನ್ನು ಮಾಡಿರುವೆವು. ಅವರಿಗೆ ಹೊಟ್ಟೆ ಹೊಸೆಯಲು ಹಚ್ಚುವೆವು; ಅವರಿಂದ ನೆಲಕ್ಕೆ ಮೂಗು ತಿಕ್ಕಿಸುವೆವು; ಕಣ್ಣುಗಳನ್ನು ಕೆಂಪಾಗಿ ಮಾಡಿ ರೇಲ್ವೆ ಡಬ್ಬಿಗಳಿಂದ ಹೊರದೂಡು**

**ನೆವು.– ಬ್ರಿಟಿಶರ ಆಡಳಿತದಲ್ಲಿ ಇದಕ್ಕಿಂತ ಹೆಚ್ಚಿನ ಅನ್ಯಾಯವು ಯಾವದಾಗಿರುವದು?** ಡಾಯರನ ಮತ್ತು ಓಡ್ವಾಯರನ ಮೇಲೆ ನಾವು ಹೊರಿಸುವ ಯಾವ ಅಪರಾಧಗಳನ್ನು ಅನ್ಯರೂ ನಮ್ಮವರೂ ನಮ್ಮ ಮೇಲೆ ಹೊರಿಸರು? ಈ ಪಾಪವನ್ನು ತೊಳೆದುಕೊಂಡು ನಾವು ಶುದ್ಧರಾಗಲಿಕ್ಕೆ ಬೇಕು. **ದುರ್ಬಲರನ್ನೂ ಅನಾಥರನ್ನೂ ರಕ್ಷಿಸಲು ನಾವು ಮುಂದುವರಿಯದ ವರೆಗೆ, ಮತ್ತು ಇನ್ನೊಬ್ಬನ ಭಾವನೆಗಳನ್ನು ನೋಯಿಸುವದು–ಒಬ್ಬನಾದರೂ ಸ್ವರಾಜ್ಯವಾದಿಗೆ–ಶಕ್ಯವಿರುವವರೆಗೆ ಸ್ವರಾಜ್ಯದ ಮಾತನ್ನೆತ್ತುವದು ವ್ಯರ್ಥವು. ಸ್ವರಾಜ್ಯವೆಂದರೆ ಯಾವ ಹಿಂದುವಾಗಲಿ ಮುಸಲ್ಮಾನನಾಗಲಿ ದುರ್ಬಲರಾದ ಹಿಂದುಗಳನ್ನು ಅಥವಾ ಮುಸಲ್ಮಾನರನ್ನು ಹತ್ತಿಡಲು ತನಗೆ ಬರುವದೆಂದು ಸೊಕ್ಕಿನಿಂದ ಒಂದು ಕ್ಷಣವೂ ತಿಳಿಯಕೂಡದು ಎಂಬರ್ಥವು.** ಅಸ್ಪೃಶ್ಯತೆ ಇರುವವರೆಗೆ ಒಂದು ವೇಳೆ ನಮಗೆ ಸ್ವರಾಜ್ಯವು ಬಂದರೂ ಮರುಕ್ಷಣದಲ್ಲಿ ಅದು ಅಳಿಯುವದು. ನಮ್ಮ ದುರ್ಬಲ ಬಾಂಧವರ ವಿಷಯದಲ್ಲಿ ಮಾಡಿದ ಪಾಪವನ್ನು ತೊಳೆದುಕೊಂಡು ಶುದ್ಧರಾಗುವವರೆಗೆ ಪಶುಗಳಿಗಿಂತ ಯಾವ ಬಗೆಯಿಂದಲೂ ನಾವು ಹೆಚ್ಚಿನವರು ಆಗಲಾರೆವು.

ಆದರೆ ಇನ್ನೂ ನನ್ನಲ್ಲಿ ಶ್ರದ್ಧೆ ಇರುವದು. ತುಳಸೀದಾಸರ ಹಾಡುಗಳಲ್ಲಿ ಕಾಣಬರುವ ಮತ್ತು ಜೈನ ವೈಷ್ಣವ ಧರ್ಮಗಳ ಆಧಾರಸ್ತಂಭವಾಗಿರುವ ದಯೆ, ಪ್ರೇಮ, ಸಹಾನುಭೂತಿ ಇವು ಜನತೆಯಲ್ಲಿ ನೆಲೆಗೊಳ್ಳುತ್ತಿರುವವೆಂಬುದು ನಾನು ಕಂಡ ಮಾತು. ದಯೆ ಪ್ರೇಮ ಸಹಾನುಭೂತಿಗಳು ಭಾಗವತದ ತಿರುಳಾಗಿರುವವು. ಗೀತೆಯ ಪ್ರತಿಯೊಂದು ಶ್ಲೋಕದಲ್ಲಿಯೂ ಇವು ತುಂಬಿ ತುಳುಕುತ್ತಲಿರುವವು. ಇವು ಜನತೆಯ ಹೃದಯದಲ್ಲಿ ಚಿರಸ್ಥಾನವನ್ನು ಪಡೆಯುತ್ತಲಿರುವವೆಂಬುದನ್ನು ನಾನು ನನ್ನ ಭಾರತ ಪ್ರವಾಸದ ಅನುಭವದಿಂದ ಕಂಡುಕೊಂಡಿದ್ದೇನೆ. ಹಿಂದೂ ಮುಸಲ್ಮಾನರ ಬಡಿದಾಟಗಳ ಸೊಲ್ಲು ಆಗಾಗ ಕೇಳಬರುತ್ತದೆ. ಪರರನ್ನು ನೋಯಿಸಲು ಹಿಂದು ಮುಂದೆ ನೋಡದ ಅನೇಕ ಜನರು ಇನ್ನೂ ಇರುವರು. ಆದರೆ ಒಟ್ಟಿನಲ್ಲಿ ದಯೆ ಔದಾರ್ಯಗಳು ಹೆಚ್ಚು

ತ್ತಿರುವನೆಂದು ನನಗೆ ಅನಿಸುತ್ತಿದೆ. ಹಿಂದುಗಳೂ ಮುಸಲ್ಮಾನರೂ ಪಾಪಭೀರುಗಳಾಗುತ್ತಿರುವದನ್ನು ನಾನು ನೋಡುತ್ತೇನೆ. ಸರಕಾರದ ಕೋರ್ಟು ಕಚೇರಿಗಳ ಮತ್ತು ವಿದ್ಯಾಲಯಗಳ ಮೋಹವು ಈಗ ನಮ್ಮನ್ನು ತೊಲಗಿರುವದು. ಇಂತಹ ಬೇರೆ ಯಾವ ಸಂಸ್ಥೆಯ ಮೋಹವೂ ನಮಗೆ ಈಗ ಇರುವದಿಲ್ಲ. ಅಜ್ಞರೂ ಅಶಿಕ್ಷಿತರೂ ಎಂದು ನಮಗೆ ತೋರುವ ಜನರೇ ನಿಜವಾಗಿ ಸುಜ್ಞರೂ ಸುಶಿಕ್ಷಿತರೂ ಎಂದು ಕರೆಯಲು ಯೋಗ್ಯರಿರುವರೆಂದು ನನಗೆ ಅನಿಸುತ್ತದೆ. ಅವರು ನಮಗಿಂತ ಹೆಚ್ಚಾಗಿ ಸುಸಂಸ್ಕೃತರಾಗಿರುವರು. ಮತ್ತು ಅವರ ಚರಿತ್ರ ನಮಗಿಂತ ಹೆಚ್ಚು ಪವಿತ್ರವಾಗಿರುವದು. **ಜನತೆಯ ಈಗಿನ ಮನಸ್ಥಿತಿಯನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದರೆ, ಸ್ವರಾಜ್ಯವೆಂದರೆ ರಾಮ ರಾಜ್ಯವು-ಭೂಸ್ವರ್ಗವು-ಧರ್ಮರಾಜ್ಯವು, ಎಂಬ ಅವರ ಅಭಿಪ್ರಾಯವಾಗಿರುವದೆಂದು ನಮಗೆ ತೋರದಿರದು.**

ನನ್ನ ಅಸ್ಪೃಶ್ಯ ಬಾಂಧವರೇ ನಿಮ್ಮ ಪ್ರಶ್ನದಿಂದ ಮೊದಲಿನಂತೆ ಜನರು ಈಗ ಉದ್ವಿಗ್ನರಾಗುವದಿಲ್ಲವೆಂದು ನಾನು ಹೇಳಬಲ್ಲೆನು. ಈ ಮಾತಿನಿಂದ ನಿಮಗೆ ಸ್ವಲ್ಪ ಸಮಾಧಾನವಾಗಬಹುದು. ಹೀಗಿದ್ದರೂ ಉಚ್ಚ ವರ್ಣದವರ ವಿಷಯದಲ್ಲಿ ನಿಮಗೆ ಯಾವ ಬಗೆಯ ಸಂಶಯವೃತ್ತಿ ಇರಕೂಡದೆಂದು ನಾನು ಹೇಳಲಾರೆನು. ನಿಮ್ಮನ್ನು ಈ ಬಗೆಯಾಗಿ ಪೀಡಿಸಿ ನಿಮ್ಮ ವಿಶ್ವಾಸವನ್ನು ಅವರು ಕಳಕೊಳ್ಳದೆ ಇರುವುದೆಂತು? ಅಸ್ಪೃಶ್ಯರು ತಾವಾಗಿಯೇ ನಿಕೃಷ್ಟರಾಗಿರದೆ ಅವರನ್ನು ಉಚ್ಚವರ್ಣದವರು ಹೀನದೆಸೆಗೊಯ್ದು ತಾವೂ ಹೀನ ಸ್ಥಿತಿಯನ್ನು ಹೊಂದಿರುವರೆಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು.

ಏಪ್ರಿಲ ಆರನೆಯ ತಾರೀಖಿನ ದಿವಸ ನಾನು ನೆಲ್ಲೂರಲ್ಲಿ ಇದ್ದೆನೆಂದು ತೋರುತ್ತದೆ. ಅಲ್ಲಿ ನಾನು ಅಸ್ಪೃಶ್ಯರನ್ನು ಕಂಡೆನು. ಮತ್ತು ಇಂದಿನಂತೆ ಅಂದು ದೇವರನ್ನು ಪ್ರಾರ್ಥಿಸಿದೆನು. ನನಗೆ ಮೋಕ್ಷವು ನಿಶ್ಚಯವಾಗಿ ಬೇಕು. ಪುನರ್ಜನ್ಮವು ಬೇಡ. **ಆದರೆ ನಾನು ಮತ್ತೆ ಹುಟ್ಟುವುದಾದಲ್ಲಿ ಅಸ್ಪೃಶ್ಯರಲ್ಲಿಯೇ ಹುಟ್ಟಲಿಚ್ಛಿಸುತ್ತೇನೆ. ಏಕೆಂದರೆ ಅವರ ದುಃಖಗಳಲ್ಲಿ ಆಪತ್ತುಗಳಲ್ಲಿ ಮತ್ತು ಅಪ**

**ಮಾಸಗಳಲ್ಲಿ ನಾನು ಪಾಲುಗಾರನಾಗಿ ಆ ದುಃಸಹವಾದ ಸ್ಥಿತಿ
ಯಿಂದ ನನ್ನನ್ನೂ ನನ್ನೊಡನೆ ಅವರನ್ನೂ ಮುಕ್ತಗೊಳಿಸಲು
ಪ್ರಯತ್ನಮಾಡಲು ನನಗೆ ಅನುವಾಗುವದು. ಆದುದರಿಂದ
ನನಗೆ ಇನ್ನೊಂದು ಜನ್ಮವು ಬಂದರೆಅದು ಬ್ರಾಹ್ಮಣರಲ್ಲಿ,
ವೈಶ್ಯರಲ್ಲಿ, ಅಥವಾ ಶೂದ್ರರಲ್ಲಿ ಬಾರದೆ ಅತಿಶೂದ್ರರಲ್ಲಿ ಬರ
ಬೇಕೆಂದು ನಾನು ದೇವರನ್ನು ಪ್ರಾರ್ಥಿಸುವೆನು.**

ಆ ಆರನೆಯ ತಾರೀಖಿಗಿಂತ ಈವೊತ್ತಿನ ದಿನವು ಹೆಚ್ಚು ಗಂಭೀರ
ವಾಗಿರುವುದು. ಈವೊತ್ತಿನ ದಿನಕ್ಕೆ ಸಾವಿರಾರು ನಿರ್ದೋಷಿಗಳ ಕೊಲೆಯ
ಸ್ಮರಣದಿಂದ ಪಾವಿತ್ರ್ಯವು ಬಂದಿರುವುದು. ಆದುದರಿಂದ ಈವೊತ್ತಿನ
ದಿವಸವೂ ಹೀಗೆ ಪ್ರಾರ್ಥಿಸಿದೆನು:— ನನ್ನ ಇಚ್ಛೆಗಳು ಕೊನೆಗಾಣುವ
ಮೊದಲು, ನನ್ನ ಅಸ್ಪೃಶ್ಯರ ಸೇವೆ ಪೂರ್ತಿಯಾಗುವ ಮೊದಲು, ನನ್ನ
ಹಿಂದು ಧರ್ಮದ ಸೇವೆ ಪೂರ್ಣವಾಗುವ ಮೊದಲು ನನಗೆ ಮರಣವೊದ
ಗಿದರೆ ನನಗೆ ಅಸ್ಪೃಶ್ಯರಲ್ಲಿ ಜನ್ಮವು ಬರಬೇಕು. ಮತ್ತು ಅದರಿಂದ
ಹಿಂದು ಧರ್ಮದ ಸೇವೆ ಪೂರ್ಣವಾಗಲು ನನಗೆ ಅನುವಾಗಬೇಕು.
ಭಂಗಿಯ ಕೆಲಸವನ್ನು ನಾನು ಪ್ರೀತಿಸುತ್ತೇನೆ. ನನ್ನ ಆಶ್ರಮದಲ್ಲಿ
ಹದಿನೆಂಟುವರ್ಷದ ಬ್ರಾಹ್ಮಣ ಹುಡುಗನೊಬ್ಬನು ಆಶ್ರಮದ ಭಂಗಿ
ಯುವನಿಗೆ ಸ್ವಚ್ಛತೆಯನ್ನು ಕಲಿಸಲು ತಾನೇ ಭಂಗಿಯ ಕೆಲಸವನ್ನು
ಮಾಡುತ್ತಿರುವನು. ಆ ಹುಡುಗನು ಸುಧಾರಕನಲ್ಲ. ಅವನು ಪರಂಪರಾ
ಪ್ರಿಯರಲ್ಲಿ ಹುಟ್ಟಿದವನು ಮತ್ತು ಬೆಳೆದವನು. ಅವನು ನಿತ್ಯವೂ ಗೀತೆ
ಯನ್ನು ಪಠಿಸುವನು ಮತ್ತು ಶ್ರದ್ಧೆಯಿಂದ ಸಂಧ್ಯಾವಂದನೆಯನ್ನು
ಮಾಡುವನು. ಅವನ ಸಂಸ್ಕೃತ ಶ್ಲೋಕಗಳ ಉಚ್ಚಾರವು ನನಗಿಂತ
ಹೆಚ್ಚಾಗಿ ನಿರ್ದೋಷವಾಗಿರುವುದು. ಪ್ರಾರ್ಥನೆ ನಡೆದಿರುವಾಗ ಅವನ
ಮೃದುವೂ ಮಧುರವೂ ಆದ ಸಂಗೀತವು ಎಲ್ಲರ ಅಂತಃಕರಣದಲ್ಲಿ ಪ್ರೇಮ
ವನ್ನು ಹುಟ್ಟಿಸುವುದು. ಆದರೆ ತನಗೆ ಭಂಗಿ ಕೆಲಸವನ್ನು ಉತ್ತಮ
ವಾಗಿ ಮಾಡಲು ಬರುವವರೆಗೆ ತನ್ನ ವಿದ್ಯೆ ಅಪೂರ್ಣವಾಗಿ ಉಳಿವುದೆಂದೂ
ಮತ್ತು ಆಶ್ರಮದ ಭಂಗಿಯುವನಿಗೆ ಕೆಲಸವನ್ನು ಉತ್ತಮವಾಗಿ ಮಾಡಲು
ಬರಬೇಕಾದರೆ ತಾನೇ ಅದನ್ನು ಮಾಡಿ ತೋರಿಸುವುದು ಯುಕ್ತವೆಂದೂ

ಅವನಿಗೆ ಎನಿಸಿತು. ನೀವು ಹಿಂದು ಸಮಾಜದ ಮೂಲಿಸ್ಯವನ್ನು ತೊಳೆ ಯುತ್ತಿರುವಿರೆಂದು ನಿಮಗೆ ಎನಿಸಬೇಕು. ಆದುದರಿಂದ ನೀವು ನಿಮ್ಮ ಜೀವನವನ್ನು ಶುದ್ಧಗೊಳಿಸಬೇಕು. ಸ್ವಚ್ಛತೆಯ ಅಭ್ಯಾಸವನ್ನು ನೀವು ಮಾಡಬೇಕು. ಯಾರೂ ನಿಮ್ಮ ಕಡೆಗೆ ಬೆರಳುಮಾಡಿ ತೋರಿಸಲು ನೀವು ಅನುವುಗೊಡಬಾರದು. ಸಾಬೂನವನ್ನು ಕೊಳ್ಳುವುದು ನಿಮ್ಮಿಂ ದಾಗದಿದ್ದರೆ ಸೌಳನ್ನಾಗಲಿ ಮಣ್ಣನ್ನಾಗಲಿ ಉಪಯೋಗಿಸಿ ಸ್ವಚ್ಛ ರಾಗಿರಿ. ನಿಮ್ಮಲ್ಲಿ ಕೆಲವರಿಗೆ ಕುಡಿವ ಮತ್ತು ಜೂಜಾಡುವ ದುರಭ್ಯಾಸ ಗಳಿರುವವು. ಅವನ್ನು ನೀವು ಬಿಡಲಿಕ್ಕೆ ಬೇಕು. ಬ್ರಾಹ್ಮಣರಲ್ಲಿಯು ಈ ದುರಭ್ಯಾಸಗಳಿರುವವೆಂದು ನೀವು ಹೇಳಬಹುದು. ಆದರೆ ಬ್ರಾಹ್ಮ ಣರು ನಿಮ್ಮಂತೆ ಅಸ್ಪೃಶ್ಯರೆಂದು ಎಣಿಸಲ್ಪಟ್ಟಿಲ್ಲ. ನಿಮ್ಮನ್ನು ಉದ್ಧಾರ ಮಾಡಿ ಪುಣ್ಯಪಡೆಯಬೇಕೆಂದು ಉಚ್ಚವರ್ಣದವರನ್ನು ನೀವು ಬೇಡಿ ಕೊಳ್ಳಲಾಗದು. ನೀವು ನಿಮ್ಮಲ್ಲಿ ಸ್ವಚ್ಛತೆ ಪಾವಿತ್ರ್ಯಗಳನ್ನು ತಂದು ಕೊಂಡು ಅವರನ್ನು ನಾಚಿಸಬೇಕು. ಮುಂದಿನ ಐದು ತಿಂಗಳಲ್ಲಿ ನಿಮ್ಮಲ್ಲಿ ಈ ಬಗೆಯ ಪಾವಿತ್ರ್ಯವು ಬರಬಹುದೆಂದು ನನ್ನ ನಂಬುಗೆ. ನನ್ನ ನಂಬುಗೆ ನಿಜವಾಗದಿದ್ದ ಪಕ್ಷದಲ್ಲಿ ನಾನು ಹೇಳಿದ ತತ್ವವು ಸರಿಯಾಗಿ ದ್ದರೂ ನನ್ನ ಎಣಿಕೆ ತಪ್ಪಾಯಿತೆಂದು ನಾನು ತಿಳಿವೆನು; ಮತ್ತು ನಾನು ಎಣಿಕೆಯಲ್ಲಿ ತಪ್ಪಿದೆನೆಂದು ಪುನಃ ಸಾರುವೆನು.

ನೀವೆಲ್ಲರೂ ಹಿಂದುಗಳಾಗಿರುವಿರೆಂದು ಹೇಳುವಿರಿ; ಭಾಗವತವನ್ನು ಓದುವಿರಿ. ಆದುದರಿಂದ ಉಚ್ಚ ವರ್ಣದವರಿಂದ ನಿಮಗೆ ಪೀಡೆಯುಂಟಾ ದರೆ ಆ ತಪ್ಪು ಹಿಂದು ಧರ್ಮದಲ್ಲಿರದೆ ಆ ಧರ್ಮದ ಅನುಯಾಯಿಗಳಲ್ಲಿ ಇರುವುದೆಂದು ನೀವು ತಿಳಿಯಬೇಕು. ನಿಮ್ಮ ಆತ್ಮೋದ್ಧಾರಕ್ಕೋಸುಗ ನಿಮ್ಮಲ್ಲಿ ಪಾವಿತ್ರ್ಯವನ್ನು ತಂದುಕೊಳ್ಳಬೇಕು. ಮದ್ಯಪಾನದಂತಿಹ ದುರಭ್ಯಾಸಗಳನ್ನು ಬಿಡಬೇಕು.

ದೇಶದೊಳಗಿನ ಎಲ್ಲಿ ಭಾಗಗಳಲ್ಲಿಯ ಅಸ್ಪೃಶ್ಯರನ್ನು ನಾನು ಕಂಡಿ ದ್ದೇನೆ. ಅವರಲ್ಲಿ ಅನೇಕ ಶಕ್ತಿಗಳು ಗುಪ್ತವಾಗಿದ್ದುದನ್ನು ನಾನು ಕಂಡೆನು. ಈ ಶಕ್ತಿಗಳ ಅರಿವು ಅವರಿಗೂ ಇಲ್ಲ; ಉಳಿದ ಹಿಂದುಗಳಿಗೂ ಇಲ್ಲ. **ಅವರ ಬುದ್ಧಿಯು ಅತ್ಯಂತ ಪರಿಶುದ್ಧವಾಗಿರುವದು.**

ನೀವು ನೂಲುವುದನ್ನೂ ನೇಯ್ಯುವುದನ್ನೂ ಕಲಿಯಬೇಕು. ಅವನ್ನು ನೀವು ನಿಮ್ಮ ವ್ಯವಸಾಯಗಳಾಗಿ ಮಾಡಿದರೆ ಬಡತನದ ಬಾಧೆ ನಿಮಗಾಗದು. ಭಂಗಿಗಳೊಡನೆ ನೀವು ಹೇಗೆ ನಡೆಯಬೇಕೆಂಬ ವಿಷಯದಲ್ಲಿ ಗೋಧ್ರಾ ಎಂಬಲ್ಲಿ ನಾನು ಹೇಳಿರುವುದನ್ನೇ ಇಲ್ಲಿ ಹೇಳುವೆನು. ಢೇಡರ ಮತ್ತು ಭಂಗಿಗಳ ನಡುವೆ ನೀವೇಕೆ ಭೇದವನ್ನು ಮಾಡಬೇಕೋ ನನಗೆ ತಿಳಿಯದು. ಅವರಿವರ ನಡುವೆ ಭೇದವಿಲ್ಲ. ಸರ್ವಸಾಧಾರಣ ಕಾಲದಲ್ಲಿ ಸರಕಾರೀ ಅಧಿಕಾರಿಗಳ ಅಥವಾ ವಕೀಲರ ವ್ಯವಸಾಯದಷ್ಟೇ ಅವರ ವ್ಯವಸಾಯವು ಸನ್ಮಾನ್ಯವಾಗಿರುವುದು. ಉಂಡೆಲೆಗಳ ಎಂಜಲನ್ನು, ಎಷ್ಟೇ ಸ್ವಚ್ಛವಾಗಿ ತೋರಿದರೂ ತಿನ್ನುವುದನ್ನು ನೀವು ಬಿಟ್ಟು ಬಿಡಬೇಕು. ನೀವು ಧಾನ್ಯವನ್ನೇ ತೆಗೆದುಕೊಳ್ಳಿರಿ. ಆ ಧಾನ್ಯವಾದರೂ ಒಳಿತಾದುದೂ ಗಟ್ಟಿಯಾದುದೂ ಇರಬೇಕು. ಅದು ಹುಳಿತಿರಕೂಡದು. ಅದನ್ನು ಕೊಡುವವರು ಮರ್ಯಾದೆಯಿಂದ ಕೊಡಬೇಕು. ಹೀಗಿಲ್ಲದೇನೇ ನೀವು ಅದನ್ನು ಸ್ವೀಕರಿಸಬೇಕು. ನಾನು ಹೇಳಿದುದನ್ನು ನೀವು ಮಾಡಲು ಸಮರ್ಥರಾದರೆ ನೀವು ನಿಮ್ಮ ಉದ್ಧಾರವನ್ನು ನಾಲ್ಕೈದು ತಿಂಗಳಲ್ಲಲ್ಲ, ನಾಲ್ಕೈದು ದಿನಗಳಲ್ಲಿ ಮಾಡಿಕೊಳ್ಳಬಹುದು.

ಉಚ್ಚ ವರ್ಣದವರು ಸ್ವಭಾವತಃ ಪಾಪಿಗಳಲ್ಲ. ಅವರು ಅಜ್ಞಾನದಲ್ಲಿ ಮುಳುಗಿರುವರು. ಈ ವರ್ಷವು ಮುಗಿವುದರೊಳಗೆ ಅಸ್ಪೃಶ್ಯತೆ ಇಲ್ಲದಂತಾಗಬೇಕು. **ಬಲಿಷ್ಠವಾದ ಎರಡು ಆಕಾಂಕ್ಷೆಗಳು ನನ್ನಲ್ಲಿರುವುದರಿಂದ ನಾನು ಬದುಕಿರುವೆನು. (೧) ಅಸ್ಪೃಶ್ಯರ ಉದ್ಧಾರವು (೨) ಗೋರಕ್ಷಣೆ.** ಈ ಎರಡು ಆಕಾಂಕ್ಷೆಗಳು ನೆರವೇರಿದರೆ ಸ್ವರಾಜ್ಯವು ಬರುವುದು. ಆಗ ನನಗೆ ಮೋಕ್ಷವು ದೊರೆಯುವುದು. ಆತ್ಮೋದ್ಧಾರವನ್ನು ಮಾಡಿಕೊಳ್ಳಲು ಬೇಕಾಗುವ ಶಕ್ತಿಯನ್ನು ಪರಮಾತ್ಮನು ನಿಮಗೆ ದಯಪಾಲಿಸಲಿ.



# ಅಸ್ಪೃಶ್ಯತೆಯೂ ಅದರ ಗರ್ಭಿತಾರ್ಥವೂ.

(೧೯೨೫ನೇ ಇಸ್ವಿಯಲ್ಲಿ ಬೆಳಗಾವಿಯಲ್ಲಿ ನೆರೆದ ಅಸ್ಪೃಶ್ಯತಾ ಸಭೆಯಲ್ಲಿ ಮಹಾತ್ಮಾ
ಗಾಂಧಿಯವರು ಮಾಡಿದ ಭಾಷಣವು).

ಮಿತ್ರರೇ, ಅಸ್ಪೃಶ್ಯತೆಯ ವಿಷಯದಲ್ಲಿ ನನ್ನ ವಿಚಾರಗಳನ್ನು ವ್ಯಕ್ತ
ಗೊಳಿಸಲು ನೀವು ಕೇಳಬೇಕಾಗುದಿಲ್ಲ. ಈ ಜನ್ಮದಲ್ಲಿ ನನಗೆ ಮೋಕ್ಷವು
ದೊರೆಯುದಿದ್ದರೆ ಮುಂದಿನ ಜನ್ಮದಲ್ಲಿ ನನಗೆ ಭಂಗಿಯಾಗಿ ಹುಟ್ಟುವಂತೆ
ಮಾಡೆಂದು ಅಂತಃಕರಣಪೂರ್ವಕವಾಗಿ ನಾನು ಭಗವಂತನನ್ನು ಪ್ರಾರ್ಥಿ
ಸುತ್ತಿರುವೆನೆಂಬುದನ್ನು ಅನೇಕಾನೇಕ ವ್ಯಾಖ್ಯಾನಗಳಲ್ಲಿ ನಾನು ಹೇಳಿ
ದ್ದೇನೆ. ಜನ್ಮತಃ ಮತ್ತು ಕರ್ಮತಃ ಉಂಟಾಗುವ ವರ್ಣಾಶ್ರಮದಲ್ಲಿ
ನನ್ನ ನಂಬಿಗೆ ಇದೆ. ಆದರೆ ಭಂಗಿಯ ವರ್ಣವು ಯಾವ ಬಗೆಯಿಂದಲೂ
ಕನಿಷ್ಟವಾದುದೆಂದು ನಾನು ತಿಳಿಯೆನು. ಇಷ್ಟೇ ಅಲ್ಲ, ಎಷ್ಟೋ ಭಂಗಿ
ಗಳು ಸನ್ಮಾನ್ಯರಾಗಿರುವುದನ್ನು ನಾನು ಬಲ್ಲೆನು. ಬ್ರಾಹ್ಮಣರಲ್ಲಿಯೂ
ಎಷ್ಟೋ ಜನರು ಮಲಿನರಾಗಿರುವುದು ಎಲ್ಲರಿಗೂ ಗೊತ್ತಿದ್ದ ಮಾತು.
ಅವರ ವಿಷಯದಲ್ಲಿ ಸ್ವಲ್ಪವೂ ಪೂಜ್ಯಬುದ್ಧಿ ಹುಟ್ಟಲು ಶಕ್ಯವಿರುವುದಿಲ್ಲ.
ನಾನು ಈ ಅಭಿಪ್ರಾಯದವನಾಗಿರುವುದರಿಂದ, ಪುನರ್ಜನ್ಮವು ನನಗೆ
ಬರುವುದಿದ್ದರೆ ಹೊಲೆಗೇರಿಯಲ್ಲಿ ಹೊಲೆಯನಾಗಿ ಹುಟ್ಟಲು ನಾನು
ಬಯಸುವೆನು. ಏಕೆಂದರೆ, ಅದರಿಂದ ಅಸ್ಪೃಶ್ಯರ ಸೇವೆಯನ್ನು ಸರಿ
ಯಾಗಿ ಮಾಡಲು ಅನುಕೂಲವಾಗುವುದಲ್ಲದೆ, ಅವರ ವಿಷಯದಲ್ಲಿ ಇತರ
ವರ್ಣದವರನ್ನು ಮನಪೊಲಿಸಲೂ ನನಗೆ ಅನುಕೂಲವಾಗುವುದು.

ಸ್ಪೃಶ್ಯರೆನಿಸಿಕೊಂಬವರು ಅಸ್ಪೃಶ್ಯರನ್ನು ಹಳಿಯಕೂಡದೆಂದು
ನಾನು ಇಚ್ಛಿಸುವಂತೆ ಅಸ್ಪೃಶ್ಯರೂ ಸ್ಪೃಶ್ಯರ ವಿಷಯದಲ್ಲಿ ಯಾವ ಬಗೆಯ
ದ್ವೇಷಬುದ್ಧಿಯನ್ನು ತಳೆಯಕೂಡದೆಂದು ನಾನು ಇಚ್ಛಿಸುತ್ತೇನೆ.
ಪಾಶ್ಚಾತ್ಯ ದೇಶದವರಂತೆ ತಮ್ಮ ಹಕ್ಕುಗಳನ್ನು ಹಿಂಸಾವೃತ್ತಿ
ಯನ್ನು ಅವಲಂಬಿಸಿ ಅವರು ಪಡೆಯಲು ಹೋಗುವುದು ನನಗೆ ಇಷ್ಟವಿಲ್ಲ.
ಜಗತ್ತಿನ ಅಭಿಪ್ರಾಯವು ಈ ಬಗೆಯ ಹಿಂಸಾವೃತ್ತಿಗೆ ವಿರುದ್ಧವಾಗಿರು

ವುದು. ಪಾಶವೀ ಬಲವನ್ನವಲಂಬಿಸಿ ಹಕ್ಕುಗಳನ್ನು ಪಡೆವುದು ಅಸಂಭವವಾಗುವ ಕಾಲವು ಬರುತ್ತಲಿರುವುದು ನನಗೆ ಸ್ಪಷ್ಟವಾಗಿ ತೋರುತ್ತಲಿದೆ. ಆದುದರಿಂದ ತಮ್ಮ ಉದ್ದೇಶವನ್ನು ಸಾಧಿಸಲು ಪಾಶವೀ ಬಲವನ್ನವಲಂಬಿಸಿದರೆ ಅವರ ಉದ್ದೇಶವು ಸರ್ವಥಾ ನೆರವೇರದೆಂದು ಸರಕಾರದವರಿಗೆ ನಾನು ಹೇಳುತ್ತಿರುವಂತೆ ನನ್ನ ಅಸ್ಪೃಶ್ಯ ಬಾಂಧವರಿಗೂ ನಾನು ಹೇಳಲಿಚ್ಛಿಸುತ್ತೇನೆ.

ನನಗೆ ಬೇಕಾದುದು ಹಿಂದು ಧರ್ಮದ ಉದ್ಧಾರವು. ಅಸ್ಪೃಶ್ಯ ಸಮಾಜವು ಹಿಂದು ಧರ್ಮದ ಒಂದು ಅಂಗವಾಗಿರುವುದು. ಹಿಂದು ಧರ್ಮದಿಂದ ಬಹಿಷ್ಕೃತನಾದ ಒಬ್ಬ ಭಂಗಿಯನ್ನಾದರೂ ನಾನು ನೋಡಿದರೆ ನನ್ನ ಅಂತಃಕರಣಕ್ಕೆ ವ್ಯಥೆಯಾಗುವುದು. ಆದರೆ ಭೇದಗಳೆಲ್ಲವು (Class distinctions) ನಷ್ಟವಾಗಬಹುದೆಂದು ನಾನು ನಂಬಲಾರೆನು. ಗೀತೆಯಲ್ಲಿ ಶ್ರೀಕೃಷ್ಣನು ಉಪದೇಶಿಸಿದ ಸಮತೆಯ ತತ್ವದಲ್ಲಿ ನನಗೆ ಶ್ರದ್ಧೆ ಇರುವುದು. ನಾಲ್ಕು ವರ್ಣಗಳ ಜನರು ಸಮಾನರಾಗಿ ತಿಳಿಯಲ್ಪಡಬೇಕೆಂದು ಗೀತೆ ನಮಗೆ ಕಲಿಸುವುದು. ಬ್ರಾಹ್ಮಣರಿಗೆ ಹೇಳುವ ಧರ್ಮವನ್ನೇ ಅದು ಭಂಗಿಗಳಿಗೆ ಹೇಳುವುದಿಲ್ಲ. ಆದರೆ ಜ್ಞಾನವಂತನಾದ ಬ್ರಾಹ್ಮಣನಿಗೆ ನಾವು ಸಲ್ಲಿಸುವಷ್ಟೇ ಮಾನವನ್ನು ಭಂಗಿಯನಿಗೂ ಸಲ್ಲಿಸತಕ್ಕುದೆಂದು ಭಗವದ್ಗೀತೆಯ ಆಗ್ರಹವು. ಆದುದರಿಂದ ತಾವು ಎರಡನೆಯವರ ದೃಷ್ಟಿಯಲ್ಲಿ ಕೀಳರಾಗಿರುವೆವೆಂಬ ಭಾವನೆ ಅಸ್ಪೃಶ್ಯರಿಗೆ ಬರಬಾರದಂತೆ ನಾವು ಪ್ರಯತ್ನಿಸುವುದು ನಮ್ಮ ಕರ್ತವ್ಯವು. ಅವರ ಹೊಟ್ಟೆಗೋಸುಗ ನಮ್ಮ ಉಂಡೆಲೆಗಳ ಎಂಜಲನ್ನು ಅವರಿಗೆ ಇಕ್ಕಕೂಡದು. **ಒಬ್ಬನೇ ಪರಮಾತ್ಮನನ್ನು ಅರ್ಚಿಸುವ ಮತ್ತು ಅಂತರ್ಬಾಹ್ಯ ಶುದ್ಧಿಯನ್ನು ಕಾಯ್ದುಕೊಳ್ಳುವ ಭಂಗಿಯನ್ನು ಮತ್ತು ಬ್ರಾಹ್ಮಣನನ್ನು ಭಿನ್ನ ಭಿನ್ನ ದೃಷ್ಟಿಯಿಂದ ನೋಡುವುದೆಂತು?** ಮಲಿನವಾದ ಎಂಜಲನ್ನವನ್ನು ನಾನು ಭಂಗಿಗೆ ಕೊಡುವುದರಿಂದ ಅಥವಾ ಆಪತ್ಕಾಲದಲ್ಲಿ ನಾನು ಅವನಿಗೆ ನೆರವಾಗದಿರುವುದರಿಂದ ನಾನು ಪಾಪಿಯಾಗುವೆನೆಂದು ನಾನಂತೂ ತಿಳಿವೆನು.

ನನ್ನ ಅಭಿಪ್ರಾಯಗಳನ್ನು ಹೆಚ್ಚಿಗೆ ಸ್ಪಷ್ಟಗೊಳಿಸುವ. ಯಾವ ಸ್ವರೂಪದಲ್ಲಿ ಈಗ ಅಸ್ಪೃಶ್ಯತೆ ನಮಗೆ ತೋರುವುದೋ ಆ ಸ್ವರೂಪದ ಅಸ್ಪೃಶ್ಯತೆಗೆ ಹಿಂದು ಧರ್ಮದಲ್ಲಿ ಸ್ಥಾನವಿಲ್ಲೆಂದು ನನ್ನ ಮತವಿದ್ದರೂ ಒಂದು ಮರ್ಯಾದಿತಾರ್ಥದ ಅಸ್ಪೃಶ್ಯತೆಗೆ ಕೆಲವೊಂದು ಪರಿಸ್ಥಿತಿಯಲ್ಲಿ ಹಿಂದೂಧರ್ಮವು ಮಾನ್ಯತೆಯನ್ನು ಕೊಟ್ಟಿರುತ್ತದೆಂದು ನನ್ನ ಅಭಿಪ್ರಾಯವು. ಉದಾಹರಣಾರ್ಥವಾಗಿ ಅಸ್ವಚ್ಛವಾದ ಪದಾರ್ಥಗಳನ್ನು ನನ್ನ ತಾಯಿ ಮುಟ್ಟಿದಾಗೆಲ್ಲ ಅವಳು ಆ ಮಟ್ಟಿಗೆ ಅಸ್ಪೃಶ್ಯೆಯಾಗುವಳು. ಸ್ನಾನವಾಗುವವರೆಗೆ ಅವಳು ಮಡಿಯಾಗಳು. ಜನ್ಮದಿಂದಲೇ ಮಾತ್ರ ಯಾವನೊಬ್ಬ ವ್ಯಕ್ತಿ ಅಸ್ಪೃಶ್ಯನಾಗುವನೆಂದು ವೈಷ್ಣವನಾದ ನಾನು ನಂಬುವುದಿಲ್ಲ. ಧರ್ಮವು ಮಾನ್ಯಮಾಡಿದ ಅಸ್ಪೃಶ್ಯತೆ ಸ್ವಲ್ಪಕಾಲ ಮಾತ್ರ ಬಾಳುವಂತಹದಿರುವುದು,—ಸುಲಭವಾಗಿ ಕಳೆದುಕೊಳ್ಳಲು ಬರುವಂತಹದಿರುವುದು. ಅಸ್ಪೃಶ್ಯತೆ ಕೃತಿಗೆ ಸಂಬಂಧಪಟ್ಟುದು, ಕರ್ತನಿಗೆ ಸಂಬಂಧಪಟ್ಟುದಲ್ಲ. ಇಷ್ಟೇ ಅಲ್ಲ, ನಾವು ಶಿಶುಗಳಿರುವಾಗ ನಮ್ಮ ತಾಯಿ ನಮ್ಮ ಸ್ವಚ್ಛತೆಗೋಸುಗ ಮಾಡಬೇಕಾದ ಮಲಿನ ಕೃತಿಗಳಿಗೋಸುಗ ಅವಳು ನಮಗೆ ಪೂಜ್ಯೆಯಾಗಿರುವಳು. ಅವಳಲ್ಲಿ ನಮ್ಮ ಪೂಜ್ಯಬುದ್ಧಿ ಅವಳ ಸೇವೆ ಹೆಚ್ಚಿದಂತೆ ಹೆಚ್ಚಾಗುವುದು. ಅದರಂತೆ ಸಮಾಜದ ಹಿತಕ್ಕೋಸುಗ ಭಂಗಿ ಜನರು ಮಾಡಬೇಕಾಗುತ್ತಿರುವ ಜನಾರೋಗ್ಯದ ಕೆಲಸಗಳಿಗೋಸುಗ ಅವರನ್ನು ನಾವು ಅತ್ಯಂತ ಮನ್ನಣೆಯಿಂದ ಕಾಣುವುದು ನಮ್ಮ ಕರ್ತವ್ಯವು.

ಇನ್ನೊಂದು ಮಾತು. **ಸಹಭೋಜನವೂ ಮಿಶ್ರವಿವಾಹವೂ ಅಸ್ಪೃಶ್ಯತೆ ನಿವಾರಣೆಗೆ ಅವಶ್ಯವಾದುದೆಂದು ನಾನು ತಿಳಿವುದಿಲ್ಲ. ವರ್ಣಾಶ್ರಮ ಧರ್ಮದಲ್ಲಿ ನನಗೆ ಶ್ರದ್ಧೆ ಇರುವುದು. ಆದರೆ ಭಂಗಿಯವರೊಡನೆ ನಾನು ಊಟ ಮಾಡುವೆನು.** ನಾನು ಸನ್ಯಾಸಿಯಾಗಿರುವೆನೆಂದು ಹೇಳಲಾರೆನು. ಏಕೆಂದರೆ ಈ ಕಲಿಯುಗದಲ್ಲಿ ಸನ್ಯಾಸಧರ್ಮವನ್ನು ಸಂಪೂರ್ಣವಾಗಿ ಪರಿಪಾಲಿಸುವುದು ಶಕ್ಯವಿರುವುದೆಂದು ನನಗೆ ಎನಿಸುವುದಿಲ್ಲ. ಆದರೆ ನಾನು ಬುದ್ಧಿಪೂರ್ವಕವಾಗಿ ಸನ್ಯಾಸದ ಕಡೆಗೆ ನಡೆದಿರುವೆನು. ಆದುದರಿಂದ ವಿಧಿ ನಿಷೇಧಗಳನ್ನು

ಪಾಲಿಸುವುದು ನನಗೆ ಅವಶ್ಯವಿಲ್ಲವಷ್ಟೇ ಅಲ್ಲ ಆದರೆ ಅವುಗಳ ಪಾಲನೆ ನನಗೆ ಅಹಿತವನ್ನು ಮಾಡುವ ಸಂಭವವಿದೆ. ನನ್ನಂತಹ ಪರಿಸ್ಥಿತಿಯು ಜನರ ವಿಷಯದಲ್ಲಿ ಮಿಶ್ರವಿವಾಹದ ಮಾತು ಹುಟ್ಟುವುದೇ ಇಲ್ಲ. ನನ್ನ ಯೋಜನೆಯಲ್ಲಿ ಮಿಶ್ರವಿವಾಹಕ್ಕೆ ಅವಕಾಶವಿಲ್ಲವೆಂದು ಹೇಳಿದರೆ ನನ್ನ ಕೆಲಸವಾಯಿತು. ನನ್ನ ಸಂಪ್ರದಾಯದ ಎಲ್ಲ ಜನರು ಪರಸ್ಪರರಲ್ಲಿ ಸಹ ಪಂಕ್ತಿಭೋಜನವನ್ನು ಮಾಡುವುದಿಲ್ಲ. ಹಲಕೆಲವು ವೈಷ್ಣವ ಕುಟುಂಬ ಗಳಲ್ಲಿ ಇನ್ನೊಬ್ಬರ ಪಾತ್ರೆಗಳನ್ನೂ ಉಪಯೋಗಿಸುವದಿಲ್ಲ; ಇಷ್ಟೇ ಅಲ್ಲ ಎರಡನೆಯವರ ಮನೆಯಿಂದ ತಂದ ಬೆಂಕಿಯ ಮೇಲೆ ಅಡಿಗೆಯನ್ನು ಮಾಡುವುದಿಲ್ಲ. ಇದನ್ನು ನೀವು ಮೂಢ ಭಾವನೆಯೆಂದು ಕರೆಯ ಬಹುದು. ಆದರೆ ನನಗೆ ಅದು ಹಾಗೆ ತೋರುವುದಿಲ್ಲ. ಇದರಿಂದ ಹಿಂದು ಧರ್ಮಕ್ಕೆ ಯಾವ ಬಾಧೆಯೂ ಸಂಭವಿಸುವುದಿಲ್ಲ. **ನನ್ನ ಆಶ್ರಮದಲ್ಲಿ ದುಧಾಭಾಯಿ ಎಂಬ ಅಸ್ಪೃಶ್ಯನೊಬ್ಬನು ಯಾವ ಭೇದಭಾವವಿಲ್ಲದೆ ಉಳಿದವರೊಡನೆ ಊಟ ಮಾಡುವನು. ಆದರೆ ಆಶ್ರಮದ ಹೊರಗಿನವರಿಗೆ ಆಶ್ರಮದ ಉದಾಹರಣೆಯ ನ್ನನುಸರಿಸಿರೆಂದು ನಾನು ಹೇಳಿನು.** ಮಾಲವೀಯರು ನನಗೆ ಎಷ್ಟು ಪೂಜ್ಯರಾಗಿರುವರೆಂಬದನ್ನು ನೀವೆಲ್ಲರೂ ಬಲ್ಲಿರಿ. ನಿತ್ಯವೂ ಅವರ ಪಾದಗಳನ್ನು ತೊಳೆಯಲು ನಾನು ಬಯಸುವೆನು. ಆದರೆ ನಾನು ಮುಟ್ಟಿದ ಅನ್ನವನ್ನು ಅವರು ಸ್ವೀಕರಿಸರು. ಇದರಿಂದ ನನ್ನ ವಿಷಯ ದಲ್ಲಿ ಅವರಿಗೆ ತಿರಸ್ಕಾರವಿದೆ ಎಂದು ತಿಳಿದು ನಾನು ಕೋಪಗೊಳ್ಳ ಬೇಕೋ ? ಸರ್ವಥಾ ಹಾಗಾಗದು. ಏಕೆಂದರೆ ಅವರಲ್ಲಿ ಸ್ವಲ್ಪವೂ ತಿರ ಸ್ಕಾರವಿರದೆಂಬದನ್ನು ನಾನು ಬಲ್ಲೆನು. ನನ್ನ ಧರ್ಮವು ನನಗೆ ಮರ್ಯಾದಾ ಧರ್ಮವನ್ನು ಅನುಸರಿಸಲು ಹೇಳುವುದು. ಪುರಾತನ ಋಷಿಗಳು ಧ್ಯಾನಬಲದಿಂದ ಅನೇಕ ಸಂಶೋಧನ ಕಾರ್ಯಗಳನ್ನು ಸಾಗಿ ಸಿದರು. ಅದರ ಪರಿಣಾಮವಾಗಿ ಅವರು ಅನೇಕ ತತ್ವಗಳನ್ನು ಕಂಡರು. ಅಂತಹತತ್ವಗಳು ಮತ್ತಾವ ಧರ್ಮದಲ್ಲಿಯೂ ದೊರೆಯವೆಂದು ನನಗೆ ತೋರುತ್ತವೆ. ಮನುಷ್ಯನ ಆತ್ಮೋನ್ನತಿಗೆ ಕೆಲವೊಂದು ಬಗೆಯ ಆಹಾ ರಗಳು ಬಾಧಕವಾಗಿರುವವೆಂಬುದು ಅವರು ಕಂಡ ತತ್ವಗಳಲ್ಲಿ ಒಂದಾಗಿ

ರುವದು. ಆದುದರಿಂದ ಅವನ್ನು ಉಪಯೋಗಿಸಕೂಡದೆಂದು ನಿಯಮ ವನ್ನು ಮಾಡಿದರು. ಪ್ರವಾಸಕ್ರಮದಲ್ಲಿ ಆಹಾರವಿಷಯದಲ್ಲಿ ನಮ್ಮ ರೀತಿ ನೀತಿಗಳಿಂದ ಭಿನ್ನವಾದ ರೀತಿನೀತಿಗಳ ಜನರ ಮಧ್ಯದಲ್ಲಿ ನಮಗೆ ಇರಬೇಕಾದ ಪ್ರಸಂಗವು ಬಂದಿರುವುದೆಂದು ತಿಳಿದ. ಸಾಮಾಜಿಕ ಆಚಾರ ವಿಚಾರಗಳ ತೀವ್ರವಾದ ಬಲವನ್ನು ಅರಿತವರಾದ ಅವರು ಅಂತಹ ಪರಿ ಸ್ಥಿತಿಯಲ್ಲಿಯ ಜನರಿಗೆ ಅನುಕೂಲವಾಗಲು ಮರ್ಯಾದಾಧರ್ಮವನ್ನು ಕಲ್ಪಿಸಿದರು. **ಮರ್ಯಾದಾಧರ್ಮದಲ್ಲಿ ನನ್ನ ನಂಬುಗೆ ಇದ್ದರೂ ಅದು ಹಿಂದೂಧರ್ಮದ ಅಚ್ಛೇದ್ಯವಾದ ಅಂಗವಿರುವುದೆಂದು ನಾನು ಎಣಿಸೆನು.** ಹಲಕೆಲವು ಸಾರೆ ಪ್ರಸಂಗಗಳಲ್ಲಿ ಇಂತಹ ವಿಧಿ ನಿಷೇಧಗಳನ್ನು ಪಾಲಿಸದಿರುವದರಿಂದ ಹಾನಿಯಾಗಲಾರದೆಂದು ನಾನು ತಿಳಿವೆನು. ಅಸ್ಪೃಶ್ಯತಾನಿವಾರಣೆಯ ಚಳವಳಿಯಲ್ಲಿ ನಾನು ಮಾಡಬೇಕೆಂದಿದ್ದ ಸುಧಾರಣೆ ಅನ್ನೋದಕ ಲಗ್ನ ವ್ಯವಹಾರಗಳಲ್ಲಿರುವ ನಿರ್ಬಂಧನೆಗಳನ್ನು ತೆಗೆದುಹಾಕುವುದು ಅಲ್ಲ. ಈ ನಿರ್ಬಂಧನೆಗಳನ್ನು ಸಂಪೂರ್ಣವಾಗಿ ತೆಗೆದುಹಾಕಿರೆಂದು ಜನರಿಗೆ ನಾನು ಬೋಧಿಸಲೊ ಲ್ಲೆನು. ನನ್ನನ್ನು ಜನರು ಡಾಂಭಿಕನೆಂದೂ, ವಿಸಂಗತವಾದ ನಡೆನುಡಿ ಯವನೆಂದೂ ಕರೆದರೂ ಕರೆಯಲಿ. ಮುಸಲ್ಮಾನರಲ್ಲಿ ಊಟ ಮಾಡಲು ನನ್ನ ಮಗನಿಗೆ ನನ್ನಿಂದ ಯಾವ ಆತಂಕವೂ ಇರದು. ತನಗೆ ಉಣ್ಣಲು ಯೋಗ್ಯವಾದ ಪದಾರ್ಥವು ಯಾವುದು, ಮತ್ತು ಯಾವುದಲ್ಲ ಎಂದು ತಿಳಿಯಲು ಅವನು ಸಮರ್ಥನಿರುವನೆಂದು ನನ್ನನಂಬುಗೆ. ಮುಸಲ್ಮಾನ ರಲ್ಲಿ ಊಟ ಮಾಡಲು ನನ್ನ ಧಾರ್ಮಿಕಭಾವನೆ ನನಗೆ ಅಡ್ಡಬಾರದು. ಏಕೆಂದರೆ ನಾನು ನನ್ನ ಆಹಾರದ ವಿಷಯದಲ್ಲಿ ಕೆಲವೊಂದು ತೀಕ್ಷ್ಣ ವಾದ ನಿಯಮಗಳನ್ನಿಟ್ಟುಕೊಂಡಿರುವೆನು. ಅಲೀಗಡದಲ್ಲಿ ಸಂಭವಿಸಿದ ಒಂದು ಸಂಗತಿಯನ್ನು ನಾನು ಇಲ್ಲಿ ಹೇಳಬೇಕೆಂದಿದ್ದೇನೆ. ನಾನೂ, ಸ್ವಾಮಿ ಸತ್ಯದೇವರವರೂ ಖಾಜಾಸಾಹೇಬರ ಅತಿಥಿಗಳಾಗಿದ್ದೆವು. ಸ್ವಾಮಿ ಸತ್ಯದೇವರ ಅಭಿಪ್ರಾಯಗಳು ನನ್ನಿಂದ ಭಿನ್ನವಾದುವು. ಅವು ಗಳ ವಿಷಯದಲ್ಲಿ ನಮ್ಮಿಬ್ಬರ ನಡುವೆ ಚರ್ಚೆ ನಡೆಯಿತು. ನನ್ನ ಅಭಿ ಪ್ರಾಯದಂತೆ ಮರ್ಯಾದಾ ಧರ್ಮವನ್ನು ಅತಿಕ್ರಮಿಸುವದು ಅವರ

ವಿಷಯದಲ್ಲಿ ಅಯುಕ್ತವಾಗಿದ್ದಂತೆ ಮುಸಲ್ಮಾನ ಗೃಹಸ್ಥನಲ್ಲಿ ಅನ್ನ
ವನ್ನು ಸ್ವೀಕರಿಸದಿರುವುದು ನನ್ನ ವಿಷಯದಲ್ಲಿ ಅಯುಕ್ತವಾಗುವುದೆಂದು
ನಾನು ಅವರಿಗೆ ಹೇಳಿದೆನು. ಸ್ವಾಮಿ ಸತ್ಯದೇವರಿಗೋಸುಗ ಬೇರೆ
ವ್ಯವಸ್ಥೆ ಮಾಡಲ್ಪಟ್ಟಿತು. ಅದರಂತೆಯೇ ನಾನು ಬಾರಿ ಸಾಹೇಬರವರ
ಅತಿಥಿಯಾಗಿದ್ದಾಗ ಅವರು ನನಗೋಸುಗ ಒಬ್ಬ ಬ್ರಾಹ್ಮಣ ಅಡಿಗೆಯ
ವನನ್ನು ತಂದಿದ್ದರು ಮತ್ತು ನನಗೆ ಬೇಕಾಗುವ ಆಹಾರದ ಎಲ್ಲ ಪದಾ
ರ್ಥಗಳನ್ನು ಪೇಟೆಯಿಂದ ಕೊಂಡು ತರಬೇಕೆಂದು ಹೇಳಿದ್ದರು. ಇಷ್ಟೇಕೆ
ತೊಂದರೆ ತಕ್ಕೊಂಡಿರೆಂದು ನಾನು ಅವರನ್ನು ಕೇಳಿದೆನು. ಅದಕ್ಕೆ
ಅವರು ನನ್ನನ್ನೂ ನನ್ನ ಮಿತ್ರರನ್ನೂ ಗುಪ್ತವಾಗಿ ಕುಲಗೆಡಿಸಲು ನಾನು
ಯತ್ನಿಸುತ್ತಿರುವೆನೆಂಬ ಸಂಶಯವು ಜನರಲ್ಲಿ ಎಳ್ಳಷ್ಟೂ ಬರಲು ಅವಕಾಶ
ವುಂಟಾಗಬಾರದೆಂದು ಹೀಗೆ ಮಾಡಿದೆನೆಂದು ಹೇಳಿದರು. ಈ ಸಂಗತಿ
ಯಿಂದ ಬಾರಿಸಾಹೇಬರ ವಿಷಯದಲ್ಲಿ ನನ್ನ ಪೂಜ್ಯಬುದ್ಧಿ ಹೆಚ್ಚಿತು.

ನಿಮ್ಮ ಮುಂದೆ ನನ್ನ ಅಂತಃಕರಣವನ್ನು ಸ್ಪಷ್ಟವಾಗಿ ತೆರೆದಿಡ
ಬೇಕೆಂಬ ಉದ್ದೇಶದಿಂದ ಇಷ್ಟೆಲ್ಲ ಕಥೆಯನ್ನು ನಾನು ನಿಮಗೆ ಹೇಳಬೇ
ಕಾಯಿತು. ನಿಮ್ಮೊಡನೆ ಅಥವಾ ಬೇರೆಯವರೊಡನೆ ನಡೆಯುತ್ತಿರುವ
ನನ್ನ ವ್ಯವಹಾರದಲ್ಲಿ ಯಾವ ಬಗೆಯ ಮರೆಮೋಸವನ್ನು ಮಾಡುವುದೂ
ನನಗೆ ಇಷ್ಟವಿಲ್ಲ. ಬಣ್ಣದ ಮಾತುಗಳನ್ನು ಹೇಳಿ ಇಲ್ಲದ ಆಶೆಗಳನ್ನು
ನಿಮ್ಮಲ್ಲಿ ಹುಟ್ಟಿಸುವದಾಗಲಿ, ನಿಮ್ಮ ಸಹಾಯವನ್ನು ಪಡೆಯುವದಾ
ಗಲಿ ನನಗೆ ಬೇಕಿಲ್ಲ. ಅಸ್ಪೃಶ್ಯತೆ ನಿವಾರಣೆಯ ಕಾರ್ಯವನ್ನು ನಾನು
ಕೈಕೊಳ್ಳಲೇ ಬೇಕಾಗಿರುವುದು; ಏಕೆಂದರೆ ಅಸ್ಪೃಶ್ಯತೆಯು ಹೋಗದಿ
ದ್ದಲ್ಲಿ ಸ್ವರಾಜ್ಯವಿಲ್ಲ. ಆದರೆ ನನಗೆ ಸ್ವರಾಜ್ಯವು ಬೇಕು. ನನ್ನವೇನಾ
ದರೂ ರಾಜಕೀಯ ಹೇತುಗಳನ್ನು ಸಾಧಿಸಲೋಸುಗ ನಿಮ್ಮ ಉಪಯೋ
ಗವನ್ನು ಮಾಡಿಕೊಳ್ಳಲು ನಾನು ಇಚ್ಛಿಸುವುದಿಲ್ಲ. ನನಗೆ ಬೇಕಾದುದು
ಸ್ವರಾಜ್ಯಕ್ಕಿಂತ ಹೆಚ್ಚಿನದೊಂದಿರುವುದು. ಅಸ್ಪೃಶ್ಯತೆಯನ್ನು ಕೊನೆಗಾ
ಣಿಸಲು ನಾನು ಆತುರನಾಗಿರುವೆನು; ಏಕೆಂದರೆ ನನ್ನ ವಿಷಯದಲ್ಲಿ ಆ
ಕಾರ್ಯವು ಒಂದು ಬಗೆಯ ಪ್ರಾಯಶ್ಚಿತ್ತವು, ತಪಸ್ಸು ಆಗಿರುವುದು.
ನಾನೀಗ ಅಸ್ಪೃಶ್ಯರನ್ನು ಶುದ್ಧಿಗೊಳಿಸಲು ಹೊರಟಿಲ್ಲ.— ಅಸ್ಪೃಶ್ಯರ

ಶುದ್ಧಿ ಎಂಬುದು ವಿವೇಕಹೀನವಾದ ಮಾತು. ನಾನು ಹೊರಟಿದುದು ನನ್ನ ಮತ್ತು ಹಿಂದು ಧರ್ಮದ ಶುದ್ಧಿಯನ್ನು ಮಾಡಲೋಸುಗ. ಈ ಅಸ್ಪೃಶ್ಯತೆಯ ಪಾಪಕ್ಕೆ ತನ್ನ ಆಶ್ರಯವನ್ನಿತ್ತು ಹಿಂದುಧರ್ಮವು ಮಹತ್ಪಾಪವನ್ನು ಮಾಡಿರುವುದು. ಆದುದರಿಂದ ನಾನೇ ಸ್ವತಃ ಪ್ರಾಯಶ್ಚಿತ್ತವನ್ನು ಮಾಡಿ,– ಪ್ರಸಂಗ ಒದಗಿದರೆ ನಿರಶನವ್ರತದ ತಪಸ್ಸನ್ನಾದರೂ ಕೈಕೊಂಡು ಹಿಂದು ಧರ್ಮವನ್ನು ಶುದ್ಧಿಗೊಳಿಸಲು ನಾನು ಆತುರನಾಗಿರುವೆನು.

ಹೀಗಿರಲು, ನನ್ನ ಉದ್ದೇಶಗಳನ್ನು ನೆರವೇರಿಸಲು ಅಹಿಂಸೆ ಮತ್ತು ಸತ್ಯ ಎಂಬಿವೇ ನಾನು ಕೈಕೊಳ್ಳಬಹುದಾದ ಸಾಧನಗಳು ಎಂಬುದನ್ನು ನಾನು ಬೇರೆ ಹೇಳಬೇಕಾಗಿಲ್ಲ. ಅಸ್ಪೃಶ್ಯರ ಮಗುವೊಂದನ್ನು ನನ್ನ ಮಗುವಾಗಿ ಮಾಡಿಕೊಂಡಿರುವೆನು. ನನ್ನ ಹೆಂಡತಿಯನ್ನು ನನ್ನ ಅಭಿಪ್ರಾಯದವಳನ್ನು ಮಾಡಲು ನನಗೆ ಶಕ್ಯವಾಗಿಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ. ಆ ಅಸ್ಪೃಶ್ಯ ಬಾಲಿಕೆಯಲ್ಲಿ ನನ್ನಷ್ಟು ಅವಳಿಗೆ ಪ್ರೇಮವಿಲ್ಲ. ಆದರೆ ಕೋಪದಿಂದ ಅವಳನ್ನು ನನ್ನಂತೆ ಮಾಡಿಕೊಳ್ಳಲು ಇಚ್ಛಿಸೆನು. ಪ್ರೇಮಬಲದಿಂದಲೇ ಅವಳನ್ನು ನಾನು ಹಾಗೆ ಮಾಡಬಲ್ಲೆನು. ನನ್ನವರು ನಿಮಗೇನಾದರೂ ಅಹಿತವನ್ನು ಬಗೆದಿದ್ದರೆ ಅದಕ್ಕೋಸುಗ ನಾನು ನಿಮ್ಮ ಕ್ಷಮೆ ಬೇಡಿಕೊಳ್ಳುವೆನು. ಅಸ್ಪೃಶ್ಯರ ವಿಷಯದಲ್ಲಿ ಉಚ್ಚ ವರ್ಣದವರ ಅಂತಃಕರಣವು ಮಾರ್ಪಡದಿದ್ದರೆ ನಾವು ಬಲಾತ್ಕಾರವನ್ನು ಕೈಕೊಳ್ಳುವೆವೆಂದು ಕೆಲವು ಅಸ್ಪೃಶ್ಯರು ಪುಣೆಯಲ್ಲಿ ನನಗೆ ಹೇಳಿದರು. ಬಲಾತ್ಕಾರವು ಅಸ್ಪೃಶ್ಯತೆಯನ್ನು ನಿವಾರಿಸಬಲ್ಲದೋ ? ಪರಂಪರಾಪ್ರಿಯರಾದಹಿಂದುಗಳ ಹಟವನ್ನು ದೂರಮಾಡಲು ನಿಮಗೂನಮಗೂ ಒಂದೇ ಮಾರ್ಗವಿರುವದು; ಅದಾವುದೆಂದರೆ ಸಮಾಧಾನದಿಂದ ಚರ್ಚೆ ಮಾಡುವದು ಮತ್ತು ವರ್ತನದಲ್ಲಿ ಶುದ್ಧತೆಯನ್ನು ತಂದುಕೊಳ್ಳುವುದು. ಅವರ ಅಂತಃಕರಣವು ಮಾರ್ಪಡುವವರೆಗೆ ನಿಮ್ಮ ದುಸ್ಥಿತಿಯನ್ನು ಶಾಂತ ರೀತಿಯಿಂದ ಸೈರಿಸಬೇಕೆಂದು ನಾನು ನಿಮಗೆ ಹೇಳಲು ಬಯಸುತ್ತೇನೆ. ನಿಮ್ಮ ಪಕ್ಷವನ್ನು ವಹಿಸಿ ನಿಮ್ಮ ದುಃಖಗಳಲ್ಲಿ ಪಾಲುಗಾರನಾಗಿರಲು ನಾನು ಆನಂದದಿಂದ ಸಿದ್ಧನಾಗಿರುವೆನು. **ಅನ್ಯ ಜಾತಿಗಳ ಜನರು**

**ಪ್ರವೇಶ ಮಾಡಿ ದೇವರನ್ನು ಪೂಜಿಸಬಹುದಾದ ಯಾವ ಗುಡಿಯಲ್ಲಿಯೂ ನೀವು ಪ್ರವೇಶ ಮಾಡಿ ದೇವರನ್ನು ಪೂಜಿಸಬಹುದು. ಯಾವ ಭೇದಭಾವವೂ ಇಲ್ಲದೆ ಅನ್ಯಜಾತಿಯವರ ಮಕ್ಕಳಂತೆ ನಿಮ್ಮ ಮಕ್ಕಳಿಗೂ ವಿದ್ಯಾಲಯಗಳಲ್ಲಿ ಪ್ರವೇಶವು ದೊರೆಯಲಿಕ್ಕೆ ಬೇಕು. ನ್ಯಾಯಿಸರಾಯರ ಅಧಿಕಾರವು ಮೊದಲಾಗಿ ಎಲ್ಲ ಅಧಿಕಾರ ಸ್ಥಳಗಳು ನಿಮಗೆ ದೊರೆಯಲು ಯಾವ ತೊಂದರೆಯೂ ಇರಲಾಗದು. ಇದು ನನ್ನ ಅಸ್ಪೃಶ್ಯತಾನಿವಾರಣೆಯ ಅರ್ಥವು.**

ಆದರೆ ನನ್ನ ಧರ್ಮವು ಹೇಳುವ ಮಾರ್ಗವನ್ನೇ ಅವಲಂಬಿಸಿ ನಾನು ಇದರಲ್ಲಿ ನಿಮಗೆ ಸಹಾಯ ಮಾಡಬಲ್ಲೆನಲ್ಲದೆ ಪಾಶ್ಚಾತ್ಯರ ಬಲಾತ್ಕಾರದ ಮಾರ್ಗದಿಂದಲ್ಲ. ಏಕೆಂದರೆ ಆ ಮಾರ್ಗದಿಂದ ಹಿಂದೂ ಧರ್ಮದ ರಕ್ಷಣೆಯನ್ನು ಮಾಡುವುದು ನನಗೆ ಅಸಾಧ್ಯವು. ನಿಮಗೋಸ್ಕರ ನಡೆಯಬೇಕಾದ ಕಾರ್ಯವು ಪವಿತ್ರವಾದುದು. ಸೈತಾನೀ ಉಪಾಯಗಳಿಂದ ಪವಿತ್ರ ಕಾರ್ಯಗಳನ್ನು ಸಾಧಿಸಲು ಹೋದರೆ ಯಾರಿಗೆ ತಾನೇ ಸಾಧ್ಯ? ಆದುದರಿಂದ ಬಲಾತ್ಕಾರದಿಂದ ನಿಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕೆಂಬ ನಿಮ್ಮ ವಿಚಾರವನ್ನು ನೀವು ಬಿಟ್ಟು ಬಿಡಿರೆಂದು ನಾನು ನಿಮಗೆ ಪ್ರಾರ್ಥಿಸುವೆನು. ಅಂತಃಕರಣದಲ್ಲಿ ಭಕ್ತಿಯಿಂದ ಭಗವಂತನ ಧ್ಯಾನವನ್ನು ಮಾಡುವದರಿಂದ ಮನುಷ್ಯನು ಮೋಕ್ಷವನ್ನು ದೊರಕಿಸಬಲ್ಲನೆಂದು ಗೀತೆಯು ಹೇಳುವುದು. ಧ್ಯಾನವು ಈಶ್ವರ ಸೇವೆ. ಈಶ್ವರ ಸೇವೆ ಮೋಕ್ಷವನ್ನು ತರಬಹುದಾದಲ್ಲಿ, ಅಸ್ಪೃಶ್ಯತಾನಿವಾರಣೆಯನ್ನು ಸ್ವಲ್ಪ ಕಾಲದಲ್ಲಿ ಅದು ತರಲಾರದೋ? ಈಶ್ವರ ಸೇವೆಯೆಂದರೆ ಶುದ್ಧಿಯನ್ನು ಬೆಳೆಯಿಸುವುದು. ಪ್ರಾರ್ಥನೆಯಿಂದ ನಮ್ಮನ್ನು ಪವಿತ್ರಗೊಳಿಸುವ. ನಮ್ಮಲ್ಲಿ ಪಾವಿತ್ರ್ಯವು ಬಂದ ಬಳಿಕ ಅಸ್ಪೃಶ್ಯತೆ ಹೋಗದಿರದು. ಅಷ್ಟೇ ಅಲ್ಲದೆ ಸ್ವರಾಜ್ಯದ ಮಾರ್ಗವೂ ನಿರಾತಂಕವಾಗುವುದು.

---

# ಸಹಸ್ರ ಮುಖ ರಾವಣ

ದಕ್ಷಿಣ ದೇಶದ ದೇಶೀಯ ಪತ್ರಿಕೆಗಳಲ್ಲಿ ಪಂಡಿತರೊಬ್ಬರು ಬರೆದ ಲೇಖಗಳ ಸಾರಾಂಶವನ್ನು ಮಿತ್ರರೊಬ್ಬರು ನನ್ನ ಕಡೆಗೆ ಕಳುಹಿರುವರು. ಅಸ್ಪೃಶ್ಯತೆಯ ಸಮರ್ಥನೆಗೋಸುಗ ಪಂಡಿತರು ಕೊಟ್ಟ ಕಾರಣಗಳು ಸಾರಾಂಶ ರೂಪವಾಗಿ ಇಂತಿವೆ.

(೧) ಆದಿ ಶಂಕರಾಚಾರ್ಯರು ಚಾಂಡಾಲನೊಬ್ಬನಿಗೆ ತಮ್ಮಿಂದ ದೂರವಿರೆಂದು ಹೇಳಿದ ಮಾತು ಮತ್ತು ತ್ರಿಶಂಕುವಿಗೆ ಚಾಂಡಾಲತ್ವವು ಬರಲು ಎಲ್ಲರು ಅವನನ್ನು ಮುಟ್ಟಿಸಿಗೊಳ್ಳದಿದ್ದ ಮಾತು ಅಸ್ಪೃಶ್ಯತೆ ಇತ್ತೀಚಿಗೆ ಬೆಳೆದ ಸಂಸ್ಥೆಯಲ್ಲವೆಂಬುದನ್ನು ಸಿದ್ಧಗೊಳಿಸುತ್ತವೆ.

(೨) ಚಾಂಡಾಲರು ಆರ್ಯ ಜನರಿಂದ ಬಹಿಷ್ಕೃತರಾದವರು.

(೩) ಅಸ್ಪೃಶ್ಯರು ತಮ್ಮ ತಮ್ಮೊಳಗೆ ಅಸ್ಪೃಶ್ಯತೆಯನ್ನು ಪಾಲಿಸುವರು.

(೪) ಅಸ್ಪೃಶ್ಯರು ಪ್ರಾಣಿಗಳನ್ನು ಕೊಲ್ಲುವುದರಿಂದಲೂ ಮತ್ತು ಯಾವಾಗಲೂ ಅವರ ವ್ಯವಹಾರವು ರಕ್ತ, ಮಾಂಸ, ಅಸ್ಥಿ ಮತ್ತು ಶೌಚ ಇವುಗಳಲ್ಲಿ ಇರುವದರಿಂದಲೂ ಅವರು ಅಸ್ಪೃಶ್ಯರಾಗಿರುವರು.

(೫) ದನಗಳನ್ನು ಕೊಲ್ಲಲೋಸುಗ ಕಟ್ಟಿದ ಮನೆಗಳು, ಮದ್ಯದ ಅಂಗಡಿಗಳು, ಸೂಳೆಯರ ಮನೆಗಳು ಜನ ಸಮಾಜದಿಂದ ದೂರವಾಗಿರುವಂತೆ ಅಸ್ಪೃಶ್ಯರೂ ದೂರದಲ್ಲಿ ಇರುವದು ಅವಶ್ಯವು.

(೬) ಪರಲೋಕದ ಸುಖಗಳು ಅವರಿಗೂ ಉಂಟು ಎಂಬ ಮಾತಿನಿಂದ ಅವರು ಸಂತುಷ್ಟರಾಗಿರಬೇಕು.

(೭) ಗಾಂಧಿಯಂತಹ ಲೋಕೋತ್ತರ ಪುರುಷರು ಈ ಜನರನ್ನು ಮುಟ್ಟಬಲ್ಲರು. ಆದರೆ ಉಪವಾಸವನ್ನೂ ಮಾಡಬಲ್ಲರು. ಆದರೆ ನಮಗೆ ಉಪವಾಸ ಮಾಡುವದೂ ಆಗುವದಿಲ್ಲ; ಆದ್ದರಿಂದ ಅವರನ್ನು ಮುಟ್ಟಲೂ ನಮಗೆ ಬರುವಂತಿಲ್ಲ.

(೮) ಮನುಷ್ಯನ ಬೆಳವಣಿಗೆಗೆ ಅಸ್ಪೃಶ್ಯತೆ ಅವಶ್ಯವಾದುದು.

(೯) ಮನುಷ್ಯನಲ್ಲಿ ಕೆಲವೊಂದು ವಿಶಿಷ್ಟ ಶಕ್ತಿ ಇರುವುದು. ಈ ಶಕ್ತಿ ಹಾಲಿನಂತಿರುವುದು. ಅದು ಅಶುದ್ಧ ಪದಾರ್ಥಗಳ ಸಂಪರ್ಕದಿಂದ ಕೆಡುವುದು. ನೀರುಳ್ಳಿಯನ್ನೂ ಕಸ್ತೂರಿಯನ್ನೂ ಒಂದೆಡೆಯಲ್ಲಿಡುವುದು ಯೋಗ್ಯವೆಂದು ತೋರಿದರೆ ಬ್ರಾಹ್ಮಣರನ್ನೂ ಅಸ್ಪೃಶ್ಯರನ್ನೂ ಒಂದೆಡೆಯಲ್ಲಿ ಕೂಡಿಡಬಹುದು.

ಇವು ನನ್ನ ಮಿತ್ರರು ಸಾರಾಂಶರೂಪವಾಗಿ ಕಳುಹಿದ ಪಂಡಿತರ ಅಭಿಪ್ರಾಯಗಳು. ಅಸ್ಪೃಶ್ಯತೆ ಸಹಸ್ರಮುಖ ರಾವಣನಂತಿರುವುದು. ಈ ರಾಕ್ಷಸವು ತಲೆಯನ್ನು ಎತ್ತಿದಾಗೆಲ್ಲ ಅದನ್ನು ಬಗ್ಗು ಬಡಿಯುವುದು ಆವಶ್ಯಕವು. ಈಗಿನ ಪರಿಸ್ಥಿತಿಯಲ್ಲಿ ಪುರಾಣದ ಹಲಕೆಲವು ಕಥೆಗಳನ್ನು ನಂಬುವುದು ಸಮಾಜದ ಹಿತಕ್ಕೆ ಅತ್ಯಂತ ಘಾತುಕವಾಗಿರುವುದು. ಶಾಸ್ತ್ರ-ಪುರಾಣಗಳಲ್ಲಿ ಹೇಳಿದ ಪ್ರತಿಯೊಂದು ವಿವರವನ್ನು ಶಬ್ದಶಃ ನಂಬಿ ಅವುಗಳಂತೆ ಅಥವಾ ಅವುಗಳಲ್ಲಿ ವರ್ಣಿಸಲ್ಪಟ್ಟ ಜನರಂತೆ ನಮ್ಮ ಆಚರಣೆಯನ್ನು ನಾವು ಇಟ್ಟುಕೊಳ್ಳಲು ಪ್ರಯತ್ನಿಸಿದರೆ ಆ ಶಾಸ್ತ್ರ ಪುರಾಣಗಳು ನಮ್ಮ ಪಾಲಿಗೆ ಮೃತ್ಯುವಿನ ಬಲೆಗಳಾಗಿ ಪರಿಣಮಿಸದೆ ಇರವು. ಮೂಲ ಭೂತತತ್ವಗಳ ಸ್ವರೂಪವನ್ನು ಸೂಕ್ಷ್ಮವಾಗಿ ಕಂಡುಕೊಳ್ಳಲು ಶಾಸ್ತ್ರ ಪುರಾಣಗಳು ನಮಗೆ ನೆರವಾಗುವುವು; ಅಷ್ಟೇ. ನಮ್ಮ ಧಾರ್ಮಿಕ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟ ಪ್ರಸಿದ್ಧ ವ್ಯಕ್ತಿಗಳಲ್ಲಾರಾದರೂ ಪಾಪ ಕೃತ್ಯಗಳನ್ನು ಮಾಡಿದ್ದರೆ ಅಂತಹ ಪಾಪಗಳನ್ನು ಮಾಡಲು ಅವರ ಕೃತ್ಯಗಳು ನಮಗೆ ಆಧಾರವಾಗಬಹುದೋ? **ಜಗತ್ತಿನಲ್ಲಿ ಅತ್ಯಂತ ಮಹತ್ವದ ಮಾತೆಂದರೆ ಸತ್ಯವು. ಸತ್ಯವೇ ಪರಮಾತ್ಮನು. ಇಷ್ಟೊಂದು ಮಾತನ್ನು ನಾವು ತಿಳಿದರೆ ಸಾಕು.** ಯುಧಿಷ್ಠಿರನಿಗೂ ಸುಳ್ಳಾಡುವ ಪ್ರಸಂಗವು ಬಂದಿತೆಂದು ಪುರಾಣವು ಹೇಳುವ ಮಾತಿನಿಂದ ನಮಗೇನು ಪ್ರಯೋಜನವು? ಅವನು ಸುಳ್ಳಾಡಿದ ಬಳಿಕ ಆ ಕ್ಷಣದಲ್ಲಿಯೇ ಅವನಿಗೆ ಅದಕ್ಕೋಸುಗ ಪ್ರಾಯಶ್ಚಿತ್ತವನ್ನನುಭೋಗಿಸಬೇಕಾಯಿತೆಂಬ ಮತ್ತು ಅವನು ಮಾಡಿದ ಯಾವ ಪುಣ್ಯದ ಕೃತ್ಯವೂ ಅವನ ಪ್ರಾಯಶ್ಚಿತ್ತವನ್ನು ಬಿಡಿಸಲಿಲ್ಲವೆಂಬ ಮಾತು ನಮಗೆ ಪ್ರಯೋಜನಕಾರಿಯಾದುದು. ಅದರಂತೆ ಆದಿ ಶಂಕರಾಚಾ

ರ್ಯರು ಚಾಂಡಾಲನಿಗೆ ದೂರವಾಗಿರಲು ಹೇಳಿದರೆಂಬ ಮಾತಿನಿಂದ ಪ್ರಯೋಜನವಿಲ್ಲ. ಎಲ್ಲ ಪ್ರಾಣಿಗಳನ್ನು ಆತ್ಮವತ್ತಾಗಿ (ನಮ್ಮಂತೆ) ನಾವು ನೋಡುತ್ತಿರಬೇಕೆಂಬ ಮಾತನ್ನು ಹೇಳುವ ಧರ್ಮವು, ಒಂದು ಪ್ರಾಣಿಗೂ, – ಸಮಾಜದ ಮಾತೆತ್ತಬೇಕಾಗಿಲ್ಲ, ನಮ್ಮಿಂದ ಅವಮಾನ ವಾಗುವಂತೆ ವರ್ತಿಸಲು ಹೇಳುವದು ಅಶಕ್ಯವು ಎಂಬುದನ್ನು ನಾವು ಅರಿತರೆ ಸಾಕು. ಇದಲ್ಲದೆ ಆದಿ ಶಂಕರರು ಹಾಗೆ ಮಾಡಿದರೋ ಇಲ್ಲವೋ ಎಂದು ನಿರ್ಣಯಿಸಲು ಸಾಕಾದಷ್ಟು ಸಂಗತಿಗಳಾದರೂ ಎಲ್ಲಿರುವವು. 'ಚಾಂಡಾಲ' ಶಬ್ದದ ಸಂಪೂರ್ಣವಾದ ಅರ್ಥವಾದರೂ ನಮಗೆಲ್ಲಿ ಗೊತ್ತಿರುವುದು. ಚಾಂಡಾಲ ಶಬ್ದಕ್ಕೆ ಅನೇಕ ಅರ್ಥಗಳಿರುವವು. ಅವುಗಳಲ್ಲಿ 'ಪಾಪಿ' ಎಂಬುದೂ ಒಂದು. ಆದರೆ ಪಾಪಿಗಳೆಲ್ಲರು ಅಸ್ಪೃಶ್ಯರಾದರೆ, ಆ ಪಂಡಿತರು ಮೊದಲಾಗಿ ನಾವೆಲ್ಲರು ಅಸ್ಪೃಶ್ಯರಾಗುವೆವು. ಅಸ್ಪೃಶ್ಯತೆ ಎಂಬುದು ಪುರಾತನವಾದ ಸಂಸ್ಥೆ ಎಂಬುದನ್ನು ಯಾರೂ ಅಲ್ಲಗಳೆವಂತಿಲ್ಲ. ಆದರೆ ಅದು ಪಾಪವೆಂದು ತೋರಿದಲ್ಲಿ ಪುರಾತನದ ಸಂಸ್ಥೆ ಎಂದು ಅದನ್ನು ಸಮರ್ಥಿಸಲು ಬರಲಾರದು.

ಚಾಂಡಾಲರು ಆರ್ಯಜನರಿಂದ ಬಹಿಷ್ಕೃತರಾದವರಾಗಿದ್ದರೆ, ಆರ್ಯರ ಸಮಾಜಕ್ಕೆ ಅದೊಂದು ಅನಿಷ್ಟವೇ. ಆರ್ಯರು ಯಾವುದೋ ಒಂದು ಕಾಲದಲ್ಲಿ ಕೆಲವೊಂದು ಜನರನ್ನು ಶಿಕ್ಷೆಯೆಂದು ಬಹಿಷ್ಕರಿಸಿದ್ದರೆ ಆ ಶಿಕ್ಷೆ ನಿಷ್ಕಾರಣವಾಗಿ ಅವರ ಸಂತತಿಗೆ ಏಕಿರಬೇಕು? ಅಸ್ಪೃಶ್ಯರೂ ತಮ್ಮ ತಮ್ಮೊಳಗೆ ಅಸ್ಪೃಶ್ಯತೆಯನ್ನು ಪಾಲಿಸುತ್ತಿದ್ದರೆ, ಯಾವುದೊಂದು ಅನಿಷ್ಟವು ನಿಯಮಿತವಾದ ಒಂದು ಸ್ಥಳದಲ್ಲಿ ಉಳಿಯದೆ ಹಬ್ಬುತ್ತ ನಡೆವುದೆಂದೂ ಅದರ ವಿನಾಶಕಾರಕವಾದ ಪರಿಣಾಮವು ಎಲ್ಲೆಲ್ಲಿಯೂ ವ್ಯಾಪಿಸುತ್ತ ಹೋಗುವುದೆಂದೂ ಸ್ಪಷ್ಟವಾಗುತ್ತದೆ. ಅಸ್ಪೃಶ್ಯರಲ್ಲಿಯೂ ಅಸ್ಪೃಶ್ಯತೆ ಉಂಟೆಂಬ ಮಾತಿನಿಂದ ಸುಸಂಸ್ಕೃತವಾದ ಹಿಂದು ಸಮಾಜವು ಆದಷ್ಟು ಬೇಗನೆ ಈ ಮಾಲಿನ್ಯವನ್ನು ತೊಳೆದುಕೊಳ್ಳಲು ಯತ್ನಿಸುವುದು ಹೆಚ್ಚು ಅಗತ್ಯವಾಗಿರುವುದೆಂದು ತೋರದಿರದು.

ಅಸ್ಪೃಶ್ಯರು ಪ್ರಾಣಿಗಳನ್ನು ಕೊಲ್ಲುವುದರಿಂದಲೂ, ಮತ್ತು ಅವರ ವ್ಯವಹಾರವು ರಕ್ತ, ಮಾಂಸ, ಅಸ್ಥಿ, ಶೌಚಗಳಲ್ಲಿರುವುದರಿಂದಲೂ ಅವರಿಗೆ

ಅಸ್ಪೃಶ್ಯತೆ ಒಂದಿದ್ದರೆ, ಬೇನೆಯವರ ಸೇವೆ ಮಾಡುವ ಶುಶ್ರೂಷಕರೂ ಡಾಕ್ಟರರೂ ಅಸ್ಪೃಶ್ಯರಾಗಬೇಕಾದೀತು. ಅದರಂತೆಯೇ ಕ್ರೈಸ್ತರೂ, ಮುಸಲ್ಮಾನರೂ, ಅನ್ನಕ್ಕೋಸುಗ ಮತ್ತು ಯಜ್ಞಕ್ಕೋಸುಗ ಪ್ರಾಣಿಗಳನ್ನು ಕೊಲ್ಲುವ ಉಚ್ಚ ವರ್ಣದವರೆಂಬ ಹಿಂದುಗಳೂ ಅಸ್ಪೃಶ್ಯರಾಗಬೇಕಾದೀತು.

ದನಗಳನ್ನು ಕೊಲ್ಲಲೋಸುಗ ಕಟ್ಟಿದ ಮನೆಗಳು, ಮದ್ಯದ ಅಂಗಡಿಗಳು, ಸೂಳೆಯರ ಮನೆಗಳು ಜನಸಮಾಜದಿಂದ ದೂರವಿರುವಂತೆ ಅಸ್ಪೃಶ್ಯರೂ ದೂರವಿರುವುದು ಅವಶ್ಯವೆಂದು ಹೇಳುವ ಮಾತು ಅಸ್ಪೃಶ್ಯರ ವಿಷಯದಲ್ಲಿ ನಮ್ಮ ದೂಷಿತ ಗ್ರಹವನ್ನು ವ್ಯಕ್ತಗೊಳಿಸುತ್ತದಲ್ಲದೆ ಬೇರೆ ಏನೂ ಅಲ್ಲ. ದನ ಕೊಲ್ಲುವ ಮನೆಗಳೂ, ಗಡಂಗಗಳೂ ದೂರವಿರುವುದು ಯೋಗ್ಯ. ಆದರೆ ದನಗಳನ್ನು ಕೊಲ್ಲುವವರಾಗಲಿ ಗಡಂಗಗಳನ್ನು ಇಟ್ಟವರಾಗಲಿ ಜನಸಮಾಜದಿಂದ ದೂರವಿರುವುದಿಲ್ಲ. ಸೂಳೆಯರು ಪ್ರತ್ಯೇಕವಾಗಿರುವುದು ಅವಶ್ಯವು. ಏಕೆಂದರೆ ಅವರ ವ್ಯವಸಾಯವು ಹೀನವಾಗಿಯೂ ಸಮಾಜಕ್ಕೆ ಅಪಾಯಕರವಾಗಿಯೂ ಇರುವುದು. ಆದರೆ ಅಸ್ಪೃಶ್ಯರ ವ್ಯವಸಾಯವು ಅನಿಷ್ಟವಲ್ಲವೆಂಬುದಷ್ಟೇ ಅಲ್ಲ, ಅದು ಸಮಾಜದ ಹಿತಕ್ಕೆ ಅತ್ಯವಶ್ಯವಾಗಿರುವುದು.

ಪರಲೋಕದ ಸುಖಗಳು ಅವರಿಗೂ ಉಂಟೆಂಬ ಮಾತಿನಿಂದ ಅವರು ಸಂತುಷ್ಟರಾಗಬೇಕೆಂದು ಹೇಳುವ ಮಾತು ಸೊಕ್ಕಿನ ಪರಮಾವಧಿ. ಪರಲೋಕದ ಸುಖವನ್ನು ಅವರಿಂದ ಕಸಿದುಕೊಳ್ಳುವುದು ಶಕ್ಯವಾಗಿದ್ದರೆ ಈ ಪಾಪದ ಸಮರ್ಥಕರು ಪರಲೋಕದಲ್ಲಿ ಅವರನ್ನು ಬೇರೆಯಾಗಿರಿಸಲು ಹಿಂದೆ ಮುಂದೆ ನೋಡುತ್ತಿರಲಿಲ್ಲ.

ಗಾಂಧಿಯವರು ಅಸ್ಪೃಶ್ಯರನ್ನು ಮುಟ್ಟಬಹುದು. ಆದರೆ ಇತರರು ಹಾಗೆ ಮಾಡಕೂಡದು, ಎಂದು ಹೇಳುವುದೆಂದರೆ ಜನರ ಕಣ್ಣಲ್ಲಿ ಮಣ್ಣನ್ನು ತೂರಿದಂತೆಯೇ ಸರಿ. ಅಸ್ಪೃಶ್ಯರ ಸ್ಪರ್ಶವು ಮತ್ತು ಸೇವೆ ಅಷ್ಟೊಂದು ಅಹಿತಕಾರಕವಾಗಿದೆಯೋ? ಅಸ್ಪೃಶ್ಯ ಜಂತುಗಳ ಹಾವಳಿಯನ್ನು ತಪ್ಪಿಸಿಕೊಳ್ಳಲು ಆದಕ್ಕೆ ಅಷ್ಟೊಂದು ವಿಶಿಷ್ಟ ಸಿದ್ಧತೆ ಬೇಕಾಗುವುದೋ? ಮುಸಲ್ಮಾನರಾಗಲಿ, ಕ್ರೈಸ್ತರಾಗಲಿ ಯಾವ ಸಿದ್ಧತೆಯನ್ನು

ಮಾಡಿಕೊಂಡಿರುವರು? ಯಾವ ಸಿದ್ಧತೆಯೂ ಇಲ್ಲದೆ ಅವರು ಅಸ್ಪೃಶ್ಯ
ರನ್ನು ಮುಟ್ಟುವರೆಂಬ ಬಳಿಕ ದೇವರು ಅವರಿಗೋಸ್ಕರ ಎಂತಹ ನರಕ
ವನ್ನು ಮಾಡಿರಬಹುದು ?

ಕೆಲವೊಂದು ಪ್ರಾಣಿಗಳ ಅಸ್ತಿತ್ವದಿಂದ ವಾತಾವರಣವೇ ದೂಷಿತ
ವಾಗುವದೆಂಬ ಮಾತನ್ನು ಬಹುದೂರ ಒಯ್ಯಲಾಗಿರುವುದು. ಉಚ್ಚವ
ರ್ಣದವರೆಲ್ಲ ಕಸ್ತೂರಿಯಂತೆ ಸುವಾಸನೆಯುಳ್ಳವರಿರುವುದಿಲ್ಲ; ಮತ್ತು
ಅಸ್ಪೃಶ್ಯರಾದರೂ ನೀರುಳ್ಳಿಯಂತೆ ದುರ್ಗಂಧವುಳ್ಳವರಾಗಿರುವುದಿಲ್ಲ.
ಉಚ್ಚವರ್ಣದವರೆಂಬುವರಿಗಿಂತ ಎಷ್ಟೋ ರೀತಿಯಿಂದ ಶ್ರೇಷ್ಠರಾದ ನಾವು
ರಾರು ಅಸ್ಪೃಶ್ಯರನ್ನು ಕಾಣಬಹುದು.

ಐದು ವರ್ಷಗಳ ವರೆಗೆ ಒಂದೇ ಸಮನೆ ಅಸ್ಪೃಶ್ಯತೆಯ ನಿವಾರಣೆ
ಗೋಸ್ಕರ ಪ್ರಯತ್ನಗಳು ನಡೆದಿದ್ದರೂ ಇಂತಹ ನೀತಿ ಬಾಹ್ಯವೂ ಪಾಪ
ಕರವೂ ಆದ ರೂಢಿಯನ್ನು ಸಮರ್ಥಿಸುವ ಅನೇಕ ವಿದ್ವಾಂಸರು
ಇನ್ನೂ ಇರುವರೆಂಬುದು ನಿಜವಾಗಿ ದುಃಖದ ಮಾತು. ಒಂದೇ ವ್ಯಕ್ತಿ
ಯಲ್ಲಿ ಪಾಂಡಿತ್ಯವೂ, ಅಸ್ಪೃಶ್ಯತೆಯಲ್ಲಿ ನಂಬಿಗೆಯೂ ಇರುತ್ತವೆಂಬ
ಮಾತಿನಿಂದ ಅಸ್ಪೃಶ್ಯತೆ ಇರಬೇಕೆಂಬ ಮಾತಿಗೆ ಬೆಂಬಲವಾಗುವುದಿಲ್ಲ.
ಶೀಲದ ಮತ್ತು ವಿವೇಕದ ಬೆಳವಣಿಗೆಗೆ ಪಾಂಡಿತ್ಯವೊಂದೇ ಸಾಲದೆಂಬೀ
ಮಾತಿನಿಂದ ಪಾಂಡಿತ್ಯದ ಶಕ್ತಿಯ ವಿಷಯದಲ್ಲಿ ನಿರಾಶೆಯಾಗುತ್ತದೆ.

---

- ೨ -

ಅಸ್ಪೃಶ್ಯತೆ ಎಂಬ ರಾಕ್ಷಸನ ಅತ್ಯಂತ ಭೀಕರವಾದ ಸ್ವರೂಪವು
ದಕ್ಷಿಣ ಹಿಂದುಸ್ಥಾನದಲ್ಲಿ ತೋರಿದಂತೆ ಮತ್ತೆಲ್ಲಿಯೂ ತೋರುವುದಿಲ್ಲ.
ಮಿತ್ರರೊಬ್ಬರು ಅಲ್ಲಿಂದ ನನಗೆ ಬರೆವುದೇನಂದರೆ:—

“ಅಸ್ಪೃಶ್ಯತಾ ನಿವಾರಣೆ ಪ್ರಚಾರಕರು ಅಸ್ಪೃಶ್ಯತಾನಿವಾರಣೆ
ಎಂದರೇನೆಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ ಅದರ ಅರ್ಥವನ್ನು ಅತಿಗೆ
ಒಯ್ದು ಸಮಾಜದಲ್ಲಿ ಅನವಶ್ಯಕವಾಗಿ ಅಸಂತೋಷವನ್ನುಂಟುಮಾಡು
ವರು. ಆದುದರಿಂದ ಅಸ್ಪೃಶ್ಯತಾ ನಿವಾರಣೆಯನ್ನು ನಾವು ಎಷ್ಟರ

ಮಟ್ಟಿಗೆ ಮಾಡಬೇಕು ಎಂಬುದರ ವಿಷಯದಲ್ಲಿ ನಿಮ್ಮ ಸ್ಪಷ್ಟವಾದ ಅಭಿಪ್ರಾಯಗಳು ಏನೆಂಬದನ್ನು ತಿಳಿಸಬೇಕು."

ಅಸ್ಪೃಶ್ಯತೆಯ ಸಮರ್ಥಕರಾಗಲಿ ಅಥವಾ ಪ್ರತಿರೋಧಕರಾಗಲಿ ಇಲ್ಲದ ತೊಂದರೆಯನ್ನು ಹಚ್ಚಿಸಲು ಅವರೇನಾದರೂ ಮಾಡಿರುವರೆಂದು ನನಗೆ ಎನಿಸುವುದಿಲ್ಲ. ಆದರೂ ಅಸ್ಪೃಶ್ಯತಾನಿವಾರಣೆಯ ಮಾರ್ಗದಲ್ಲಿ ವಿಘ್ನಗಳನ್ನು ತಂದೊಡ್ಡಬೇಕೆಂಬ ಮನಃಪ್ರವೃತ್ತಿ ಇರದ ಜನರ ಹಲ ಕೆಲವು ಪ್ರಶ್ನೆಗಳನ್ನೂ ಮತ್ತು ಬಹು ಪುರಾತನ ಕಾಲದಿಂದ ನಡೆದು ಬಂದ ಹಲಕೆಲವು ಕಲ್ಪನೆಗಳು ಕಂಡಬರದಿದ್ದರೆ ಅಸ್ಪೃಶ್ಯತಾನಿವಾರಣೆಯ ಕಾರ್ಯವನ್ನು ಸಮ್ಮತಿಸುವ ಜನರ ಮನಸಿನಲ್ಲಿ ಬರುವ ಪ್ರಶ್ನೆಗಳನ್ನೂ ಬಿಡಿಸುವುದು ಅವಶ್ಯವಿದೆ.

ನನ್ನ ಮಿತ್ರರ ಮೊದಲನೆಯ ಪ್ರಶ್ನೆ ಇಂತಿದೆ:—

"ವರ್ಣಾಶ್ರಮಧರ್ಮದ ತತ್ವಗಳು ಭಾರತ ರಾಷ್ಟ್ರನಿರ್ಮಾಣಕ್ಕೆ ವಿಸಂಗತವಾಗಿರುವುವೆಂದು ನಿಮ್ಮ ಅಭಿಪ್ರಾಯವಿರುವುದೇನು?"

ವರ್ಣಾಶ್ರಮಧರ್ಮಕ್ಕೂ ಮತ್ತು ಅಸ್ಪೃಶ್ಯತೆಗೂ ಅಥವಾ ಪ್ರಚಲಿತ ಜಾತಿಪದ್ಧತಿಗೂ ಏನೂ ಸಂಬಂಧವಿಲ್ಲ. ನಾನು ತಿಳಿದಿರುವ ವರ್ಣಾಶ್ರಮಧರ್ಮವು ಭಾರತರಾಷ್ಟ್ರಧರ್ಮದ ಬೆಳವಣಿಗೆಗೆ ವಿಸಂಗತವಾಗಿಲ್ಲ. ಇಷ್ಟೇ ಅಲ್ಲ, ನಾನು ತಿಳಿದಂತೆ ವರ್ಣಾಶ್ರಮ ಧರ್ಮವು ಇದ್ದರೆ ಅದು ರಾಷ್ಟ್ರಭಾವನೆಯನ್ನು ವೃದ್ಧಿಗೊಳಿಸಲು ಅನುಕೂಲವೇ ಆಗುವದು.

ಎರಡನೆಯ ಪ್ರಶ್ನೆ:—

"ಸ್ಪರ್ಶದೋಷಕ್ಕೂ ದೃಷ್ಟಿದೋಷಕ್ಕೂ ವೇದಗಳಲ್ಲಿ ಆಧಾರ ವಿರುವುವೆಂದು ನೀವು ತಿಳಿವಿರೇನು?"

ನಾನು ವೇದವನ್ನು ಮೂಲದಲ್ಲಿ ಓದಿಲ್ಲವಾದರೂ, ವೇದದ ಪಾವಿತ್ರ್ಯದ ವಿಷಯದಲ್ಲಿ ನನಗೆ ಪೂರ್ಣ ಶ್ರದ್ಧೆಯುಂಟು. ಆದುದರಿಂದ ಸ್ಪರ್ಶದೋಷಕ್ಕೂ ದೃಷ್ಟಿದೋಷಕ್ಕೂ ವೇದಗಳಲ್ಲಿ ಆಧಾರವು ದೊರೆಯನೆಂದು ಖಂಡಿತವಾಗಿ ಹೇಳಬಲ್ಲೆನು. ಈ ವಿಷಯದಲ್ಲಿ ನನಗಿಂತ

ಶ್ರೀಯುತ ಚಿಂತಾಮಣಿರಾವ ವೈದ್ಯರು ಮತ್ತು ಪಂಡಿತ ಸಾತವಳೇ
ಕರರು ಇವರಂತಹ ವಿದ್ವಾಂಸರು ಹೆಚ್ಚು ಅಧಿಕಾರದಿಂದ ಮಾತನಾಡ
ಬಲ್ಲರು. ಆದರೆ ವೇದದ ಆಧಾರವು ಇರಲಿ ಇರದಿರಲಿ, ಅಸ್ಪೃಶ್ಯತೆ ನಮ್ಮ
ನೀತಿ ಭಾವನೆಗೆ ಅಸಹ್ಯವಾಗಿದ್ದರೆ ವೇದಗಳಲ್ಲಿ ಉಪದಿಷ್ಟವಾದ ತತ್ವ
ಗಳಿಗೆ ಅದು ವಿರುದ್ಧವಾಗಿರುವುದೆಂದು ಯಾವ ವಿಚಾರವನ್ನೂ ಮಾಡದೆ,
ಅದನ್ನು ಬಿಡಲೇ ಬೇಕು; ನೀತಿಯ ತತ್ವಗಳಿಗಾದರೂ ಅದು ವಿರುದ್ಧ
ವಾಗಿರುವುದೆಂದು ಅದನ್ನು ನಾವು ಬಿಡಲೇಬೇಕು.

ಮುಂದಿನ ನಾಲ್ಕು ಪ್ರಶ್ನೆಗಳ ಸಾರಾಂಶವು ಇಂತಿರುವುದು:—

"ಕರ್ಮಕಾಂಡಕ್ಕೆ ಆಕರ್ಷಣಶಕ್ತಿಯ ನಿಯಮಗಳ ಜ್ಞಾನವು
ಆಧಾರವಾಗಿರುವುದೆಂದೂ, ದೃಷ್ಟಿ ಸ್ಪರ್ಶದೋಷಗಳ ಮತ್ತು ವೃದ್ಧಿ
ಸೂತಕಗಳ ನಿಯಮಗಳು ಚಿತ್ತಶುದ್ಧಿಗೋಸುಗ ಕಲ್ಪಿಸಲ್ಪಟ್ಟಿರುವ
ವೆಂದೂ ನಿಮಗೆ ಎನಿಸುವುದಿಲ್ಲವೋ?"

ಮೇಲಿನ ನಿಯಮಗಳು ಚಿತ್ತಶುದ್ಧಿಗೋಸುಗ ಕಲ್ಪಿಸಲ್ಪಟ್ಟಿರುವು
ವೆಂಬ ಮಾತಿಗೆ ಮಹತ್ವವಿಲ್ಲದಿಲ್ಲ. ಆದರೆ ವೇದಗಳು, ಉಪನಿಷತ್ತುಗಳು
ಪುರಾಣಗಳು, ಶಾಸ್ತ್ರಗಳು ಜಗತ್ತಿನೊಳಗಿನ ಇತರ ಎಲ್ಲ ಧರ್ಮಗಳು
ಚಿತ್ತಶುದ್ಧಿ ಎಂಬುದು ಅಂತಃಕ್ರಿಯೆಯೆಂದು ನಿಚ್ಚಳವಾಗಿ ಸಾರುವುವು.
ಮನಸು ಮನಸುಗಳ ನಡುವಿನ ಸೂಕ್ಷ್ಮವಾದ ಆಕರ್ಷಣ ಶಕ್ತಿಯ
ಮುಂದೆ ಜಡದೇಹಗಳ ಆಕರ್ಷಣಶಕ್ತಿ ಏನೂ ಅಲ್ಲವೆಂದೂ ಅವು ಹೇಳು
ತ್ತವೆ; ಕೇವಲ ಬಾಹ್ಯಶುದ್ಧಿಯ ಆಚಾರಗಳನ್ನು ಪಾಲಿಸುವ ಮನು
ಷ್ಯನು ತನ್ನ ನೆರೆಯ ಬಾಂಧವರಿಗಿಂತ ತಾನು ಹೆಚ್ಚಿನವನೆಂದು ತಿಳಿದರೆ
ಮತ್ತು ಅವರನ್ನು ಪಶುಗಳಂತೆ ನಡೆಯಿಸಿಕೊಳ್ಳಲು ಪ್ರವೃತ್ತನಾದರೆ,
ಆ ಬಾಹ್ಯಶುದ್ಧಿಯ ಆಚಾರಗಳು ಘಾತುಕವಾಗಿ ಪರಿಣಮಿಸದೆ ಇರವು
ಎಂದೂ ಅವು ಸಾರುತ್ತವೆ.

ಇನ್ನು ಏಳನೆಯ ಪ್ರಶ್ನೆ:-

"ಜೀವನ್ಮುಕ್ತರು, ಇದೇ ದೇಹದಲ್ಲಿದ್ದುಕೊಂಡು ಮುಕ್ತಿ
ಯನ್ನು ಪಡೆದವರು, ವಿಧಿ ನಿಷೇಧಗಳ ನಿಯಮಗಳನ್ನು ಮೀರಿದವರು,

ಆಚರಿಸುವ ಕ್ರಮಗಳು ಸರ್ವಸಾಮಾನ್ಯರ ಆಧ್ಯಾತ್ಮಿಕ ಮೂಲ ಪ್ರಗತಿಗೆ ಅನುಕೂಲವಾಗುವವೆಂದು ನೀವು ತಿಳಿವಿರೇನು ?"

ಯಾವನಾದರೂ ಒಬ್ಬ ಮನುಷ್ಯನು ಎಷ್ಟೇ ಉಚ್ಚ ಸ್ಥಿತಿಯನ್ನು ಪಡೆದಿದ್ದರೂ ಭೂಮಿಯ ಮೇಲೆ ಇತರ ಜೀವಿಗಳೊಡನೆ ಅವನು ಬದುಕಿರುವವರೆಗೆ ಇತರ ಜನರು ಪಾಲಿಸಬೇಕಾದ ನಿಯಮಗಳನ್ನು ವಿಧಿಸಬಲ್ಲನೆಂದು ನನಗೆ ತೋರುವುದಿಲ್ಲ. ಆದುದರಿಂದ ಈ ನಿಯಮಗಳು ತರ್ಕಶುದ್ಧವಾಗಿರಲಿಕ್ಕೆ ಬೇಕು; ಅಂತರಾತ್ಮನನ್ನು ಅವು ಸರ್ವಥಾ ಕುಗ್ಗಿಸಕೂಡದು. ಅಸ್ಪೃಶ್ಯತೆಯ ವಿಷಯದಲ್ಲಿ ಜನರು ಈಗ ಪಾಲಿಸುತ್ತಿರುವ ನಿಯಮಗಳು ಅಂತರಾತ್ಮದ ಬೆಳವಣಿಗೆಗೆ ಪ್ರತಿಕೂಲವಾಗಿರುವವೆಂದು ಸಪ್ರಮಾಣವಾಗಿ ತೋರಿಸಬಹುದು. ಅವು ಹಿಂದುಧರ್ಮದಲ್ಲಿ ಅತ್ಯಂತ ಉದಾರವೂ ಉತ್ಕೃಷ್ಟವೂ ಆದ ತತ್ವಗಳಿಗೆಲ್ಲ ಸಂಪೂರ್ಣವಾಗಿ ವಿಸಂಗತವಾಗಿರುವವು.

"ವರ್ಣಧರ್ಮದಲ್ಲಿ ನಿಮ್ಮ ನಂಬಿಗೆ ಇಲ್ಲವೋ" ಎಂಬುದು ಮುಂದಿನ ಪ್ರಶ್ನವು.

ನಾನು ಈ ವರೆಗೆ ಅನೇಕಸಲ ಹೇಳಿದ ಅರ್ಥದಲ್ಲಿ ನಾನು ವರ್ಣಧರ್ಮವನ್ನು ನಂಬುತ್ತೇನೆ. ನನ್ನ ಅಭಿಪ್ರಾಯದಲ್ಲಿ ವರ್ಣಧರ್ಮಕ್ಕೂ ಅಸ್ಪೃಶ್ಯತೆಗೂ ಅಥವಾ ವರ್ಣವರ್ಣಗಳ ನಡುವಿನ ಉಚ್ಚ ನೀಚ ಭಾವನೆಗೂ ಯಾವ ಬಗೆಯ ಸಂಬಂಧವೂ ಇರುವುದಿಲ್ಲ.

ಮತ್ತೊಂದು ಪ್ರಶ್ನವು

"ಕೆಳಗಿನ ಶ್ಲೋಕಗಳಲ್ಲಿ ಅಸ್ಪೃಶ್ಯತೆಗೆ ಅಪವಾದಗಳು ಹೇಳಲ್ಪಟ್ಟಿರುವವು.

"ಕಲ್ಯಾಣೇ ತೀರ್ಥಯಾತ್ರಾಯಾಂ ರಾಷ್ಟ್ರ ಕೋಪೇಚ ಸಂಭ್ರಮೇ ।
ದೇವೋತ್ಸವೇ ಚ ದಾರಿದ್ರ್ಯೇ ಸ್ಪೃಷ್ಟಿ ದೋಷೋ ನ ವಿದ್ಯತೇ ॥"

(ಮಂಗಲ ಪ್ರಸಂಗಗಳಲ್ಲಿ, ತೀರ್ಥಯಾತ್ರೆಗಳಲ್ಲಿ ರಾಷ್ಟ್ರೀಯ ಉಪಪ್ಲವಗಳಲ್ಲಿ, ಭಯದ ಪ್ರಸಂಗಗಳಲ್ಲಿ, ದೇವೋತ್ಸವಗಳಲ್ಲಿ ಮತ್ತು ದಾರಿದ್ರ್ಯದಲ್ಲಿ ಸ್ಪರ್ಶದೋಷವುಂಟಾಗದು.)

ಈ ಅಪವಾದಗಳಿಂದ ಅಸ್ಪೃಶ್ಯತೆಯನ್ನು ಪಾಲಿಸಬೇಕೆಂಬ ನಿಯಮವು ಸಿದ್ಧವಾಗುತ್ತದೆ. ಆದುದರಿಂದ ನೀವು ಈ ಶ್ಲೋಕವನ್ನು ಆಧಾರವಾಗಿಟ್ಟುಕೊಂಡು ಅಸ್ಪೃಶ್ಯತೆಗೆ ಮರ್ಯಾದೆಯೊಂದನ್ನು ಕಲ್ಪಿಸುವಿರಾ ?''

ಈ ಶ್ಲೋಕವನ್ನು ನಿರ್ಮಿಸಿದ ಜಾಣನು ಕಲ್ಪಿಸಬಹುದಾದ ಎಲ್ಲ ಪ್ರಸಂಗಗಳನ್ನು ತನ್ನ ವಿಶಾಲವಾದ ಅಪವಾದ ಮಾಲಿಕೆಯಲ್ಲಿ ಪೋಣಿಸಿದ್ದಾನೆ. ಆದುದರಿಂದ ಭೀತಿ ದಾರಿದ್ರ್ಯ ಮತ್ತು ಮಂಗಲ ಪ್ರಸಂಗ ಇವುಗಳಲ್ಲಿ ಒಂದಿಲ್ಲೊಂದರಲ್ಲಿ ಸಮಾವಿಷ್ಟವಾಗದ ಪ್ರಸಂಗಗಳು ಯಾವು ಎಂಬುದನ್ನು ಅಸ್ಪೃಶ್ಯತೆಯ ಸಮರ್ಥಕರು ಹೇಳಬೇಕೆಂದು ನಾನು ಸೂಚಿಸುತ್ತೇನೆ. ಭಿನ್ನ ಭಿನ್ನ ಪ್ರಾಂತಗಳಲ್ಲಿ ಅಸ್ಪೃಶ್ಯತೆ ಕೇವಲ ಪರಂಪರಾಗತವಾದ ರೂಢಿಯನ್ನು ಅವಲಂಬಿಸಿರುವದೆಂಬ ಮಾತು ಸ್ಪಷ್ಟವಿದೆ. ಹೀಗಿದ್ದರೂ ಅಸ್ಪೃಶ್ಯತೆಯನ್ನು ಸಮರ್ಥಿಸುವ ಜನರು ಎಷ್ಟು ವಿಚಾರಹೀನರಾಗಿರುವರೆಂಬುದನ್ನು ನಮ್ಮ ಮಿತ್ರರು ಕಂಡಂತೆ ತೋರುವುದಿಲ್ಲ. ಈ ವರೆಗೆ ಯಾವನೂ ಅಸ್ಪೃಶ್ಯತೆ, ಅದೃಶ್ಯತೆ ಇವುಗಳ ಅರ್ಥವನ್ನು ಸ್ಪಷ್ಟಗೊಳಿಸಿಲ್ಲ. ಅದರಂತೆ 'ಸಮೀಪದಲ್ಲಿ ಬರಕೂಡದವ' ಎಂಬುದರ ಅರ್ಥವನ್ನಾದರೂ ಯಾವನೂ ಸ್ಪಷ್ಟಗೊಳಿಸಿಲ್ಲ.

ಇನ್ನು ಕೊನೆಯ ಪ್ರಶ್ನವು.

'' ರಾಜಕಾರಣವನ್ನು ಧಾರ್ಮಿಕ ತತ್ವಗಳಿಗನುಸರಿಸಿ ನಡೆಯಿಸುವ ಪ್ರಯತ್ನದಲ್ಲಿ ಅಶ್ಪೃಶ್ಯತೆಗೆ ನೀವು ಹಾಕಬಹುದಾದ ಕನಿಷ್ಠಪಕ್ಷದ ಮರ್ಯಾದೆಯಾದರೂ ಯಾವುದು ?''

ಅಸ್ಪೃಶ್ಯತೆಗೆ ಆಸ್ಪದವೇ ಇರಕೂಡದೆಂದು ನನ್ನ ಮತ. ರಾಜಕಾರಣವನ್ನು ಧಾರ್ಮಿಕ ತತ್ವಗಳಿಗನುಸರಿಸಿ ನಡೆಯಿಸುವುದಾದರೆ ಈಗ ವ್ಯವಹಾರದಲ್ಲಿರುವ ಅಸ್ಪೃಶ್ಯತೆಯನ್ನು ಮೊಟ್ಟಮೊದಲು ಸಮೂಲವಾಗಿ ನಾಶಪಡಿಸಬೇಕು. ಜನ್ಮಮಾತ್ರದಿಂದಾಗಲಿ ಅಥವಾ ವ್ಯವಸಾಯದಿಂದಾಗಲಿ ಈಗ ಬರುತ್ತಿರುವ ಅಸ್ಪೃಶ್ಯತೆ ಮನುಷ್ಯನ ಧಾರ್ಮಿಕ ಭಾವನೆಗೆ ಹೇಯವೂ ತಿರಸ್ಕರಣೀಯವೂ ಆಗಿರುವುದು.

---

# ಪತಿತ ವರ್ಗಗಳು

(೧೯೨೦ನೆಯ ಅಕ್ಟೋಬರ ೨೦ರ 'ಯಂಗ ಇಂಡಿಯಾ' ಪತ್ರಿಕೆಯಿಂದ ಆಯ್ದುಕೊಂಡದ್ದು)

ಸ್ವಾಮಿ ವಿವೇಕಾನಂದರು ಪಂಚಮರನ್ನು 'ದಲಿತ' (Suppressed) ವರ್ಗದವರೆಂದು ಕರೆಯುತ್ತಿದ್ದರು. ವಿವೇಕಾನಂದರ ವಿಶೇಷಣವು ಹೆಚ್ಚು ಸರಿಯಾಗಿರುವದೆಂಬುದರಲ್ಲಿ ಸಂದೇಹವಿಲ್ಲ. ನಾವು ಪಂಚಮರನ್ನು ತುಳಿದು ಮೆಟ್ಟುವ ಪ್ರಯತ್ನದಲ್ಲಿ ನಾವೇ ದುರ್ಗತಿಗೀಡಾಗಿರುವೆವು. "ನಾವು ಸಾಮ್ರಾಜ್ಯದ ಪಂಚಮರಾಗಿರುವೆವು" ಎಂಬ ಮಾತು ಗೋಖಲೆಯವರು ಹೇಳಿದಂತೆ ನ್ಯಾಯಿಯಾದ ಪರಮಾತ್ಮನು ನಮಗೆ ಯೋಗ್ಯವಾದ ಪ್ರಾಯಶ್ಚಿತ್ತವನ್ನು ಕೊಟ್ಟಿರುವನೆಂದು ತೋರಿಸುತ್ತದೆ. ಮಿತ್ರರೊಬ್ಬರು ನನಗೆ ಬರೆದ ದೈನ್ಯಮಯವಾದ ಪತ್ರದಲ್ಲಿ ಪಂಚಮರಿಗೋಸುಗ ನಾನು ಮಾಡುತ್ತಿರುವುದು ಏನೆಂದು ಕೊಚ್ಚಿನಿಂದ ಪ್ರಶ್ನೆ ಮಾಡಿರುವರು. " ನೀವು ನಮಗೆ ಮಾಡುತ್ತಿರುವ ಅನ್ಯಾಯವನ್ನು ನಿಲ್ಲಿಸಿರೆಂದು ಇಂಗ್ಲಿಷರಿಗೆ ನಾವು ಹೇಳುವ ಮೊದಲು ನಾವು ಮಾಡುತ್ತಿರುವ ಅನ್ಯಾಯವನ್ನು ನಿಲ್ಲಿಸಬಾರದೋ ? " ಯೋಗ್ಯ ಶಬ್ದಗಳಲ್ಲಿ ಕೇಳಿದ ಯೋಗ್ಯವಾದ ಪ್ರಶ್ನೆ ಇದು. ದಾಸ್ಯದಲ್ಲಿ ಬಿದ್ದ ರಾಷ್ಟ್ರದಲ್ಲಿ ದಲಿತ ವರ್ಗದವರನ್ನು ನಾನು ಸ್ವತಃ ಮುಕ್ತನಾಗದೆ ದಾಸ್ಯದಿಂದ ಮುಕ್ತಗೊಳಿಸಲು ಶಕ್ಯವಿದ್ದರೆ ಈಗಲೇ ನಾನು ಅದನ್ನು ಮಾಡುವೆನು. ಆದರೆ ಅದು ಅಶಕ್ಯವು. ಸರಿಯಾದುದನ್ನು ಮಾಡಲೂ ದಾಸ್ಯದಲ್ಲಿದ್ದವನಿಗೆ ಸ್ವಾತಂತ್ರ್ಯವಿಲ್ಲ. ಪರದೇಶದ ಮಾಲುಗಳನ್ನು ನಮ್ಮ ದೇಶದಲ್ಲಿ ಬರಗೊಡದಿರುವದು ಒಂದು ಸರಿಯಾದ ಮಾತು. ಆದರೆ ಈ ಮಾತನ್ನು ಸಾಧಿಸಲು ನನಗೆ ಶಕ್ತಿ ಎಲ್ಲಿ? ನಿಯಮವಿಧಾಯಕ ಮಂಡಲವು ಸಂಪೂರ್ಣವಾಗಿ ರಾಷ್ಟ್ರೀಯ ವೃತ್ತಿಯದಾಗಿದ್ದರೆ ದಲಿತವರ್ಗದ ಉಪಯೋಗಕ್ಕೋಸುಗವೇ ಉತ್ತಮವಾದ ಭಾವಿಗಳನ್ನು ಅಗಿಸಿ, ಅವರಿಗೋಸುಗ ಒಳಿತಾದ ಅನೇಕ ವಿದ್ಯಾಲಯಗಳನ್ನು ಸ್ಥಾಪಿಸಿ ಹಿಂದುಗಳ ದುರ

ಭಿಮಾನವನ್ನು ತಗ್ಗಿಸಲು ಯತ್ನಿಸುತ್ತಿದ್ದೇನು. ಆದರೆ ಆ ಸುದಿನವು ಎಂದು ಬರುವುದೋ !

ಆ ಸುದಿವಸವು ಬರುವವರೆಗೆ ಅಸ್ಪೃಶ್ಯರು ತಮ್ಮ ಹಾದಿಯನ್ನು ತಾವೇ ಕಂಡುಕೊಳ್ಳಲೆಂದು ಬಿಟ್ಟುಬಿಡಬೇಕೋ ? ಸರ್ವಥಾ ಹಾಗಾಗ ಕೂಡದು. ಶಕ್ಯವಿದ್ದ ಮಟ್ಟಿಗೆ ನಾನು ನನ್ನ ಪಂಚಮ ಬಾಂಧವರ ಹಿತ ಕ್ಕೋಸುಗ ಹೆಣಗಿರುವೆನು ಮತ್ತು ಹೆಣಗುತ್ತಿರುವೆನು.

ನಮ್ಮ ರಾಷ್ಟ್ರದ ಈ ದಲಿತ ವರ್ಗದವರಿಗೆ ಮೂರು ಮಾರ್ಗಗಳಿ ರುವವು. ಅವರು ತಾಳ್ಮೆಯನ್ನು ಕಳೆದುಕೊಂಡು ನಮ್ಮನ್ನು ದಾಸರಾಗಿ ಮಾಡಿದ ಸರಕಾರದ ಸಾಹಾಯ್ಯವನ್ನು ಕೋರಬಹುದು. ಆ ಸಾಹಾ ಯ್ಯವಾದರೂ ಅವರಿಗೆ ದೊರೆಯಬಹುದು. ಆದರೆ ಅವರ ಸ್ಥಿತಿ 'ಉರಿವ ಹಂಚಿನಲ್ಲಿದ್ದುದು ಬೆಂಕಿಯಲ್ಲಿ ಬಿದ್ದಂತೆ' ಆಗುವುದು ನಿಜ. ಈಗ ಅವರು ದಾಸರ ದಾಸರಾಗಿರುವರು. ಸರಕಾರವು ಅವರಿಗೆ ಸಹಾಯವನ್ನಿತ್ತರೆ ಅವರ ಬಾಂಧವರಾದ ನಮ್ಮನ್ನು ಮುರಿಯಲು ಅದು ಅವರನ್ನು ಉಪ ಯೋಗಿಸಿಕೊಳ್ಳುವುದು. ನಮ್ಮಿಂದ ಅವರಿಗೆ ಹಿಂಸೆಯಾಗುವುದು ನಿಂತು ಅವರಿಂದ ನಮಗೆ ಹಿಂಸೆ ಒದಗುವುದು. ಮುಸಲ್ಮಾನರ ಉದಾಹರಣೆ ನಮ್ಮ ಕಣ್ಣಮುಂದಿವೆ. ಮೊದಲಿಗಿಂತ ತಮ್ಮ ಸ್ಥಿತಿ ಕೆಟ್ಟಿದೆ ಎಂಬುದನ್ನು ಅವರು ಕಂಡಿರುವರು. ಶೀಖರ ಸ್ಥಿತಿಯಾದರೂ ಹಾಗೆಯೇ ಆಯಿತು. ಹಿಂದುಸ್ಥಾನದಲ್ಲಿ ಶೀಖರಿಗಿಂತ ಹೆಚ್ಚು ಅಸಂತುಷ್ಟವಾದ ಜನಾಂಗವು ಈಗ ಮತ್ತೊಂದಿಲ್ಲ. ಸರಕಾರದ ಸಾಹಾಯ್ಯವನ್ನು ಪಡೆವುದರಿಂದ ನಮ್ಮ ಕೆಲಸವಾಗದು.

ಎರಡನೆಯ ಮಾರ್ಗವೆಂದರೆ:— ಹಿಂದುಧರ್ಮವನ್ನು ಬಿಟ್ಟು ಮುಸ ಲ್ಮಾನೀ ಧರ್ಮವನ್ನಾಗಲಿ ಕ್ರೈಸ್ತಧರ್ಮವನ್ನಾಗಲಿ ಅವಲಂಬಿಸುವದು. ಐಹಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಧರ್ಮಾಂತರವನ್ನು ಮಾಡು ವುದು ಸರಿಯಾದರೆ ಹಾಗೆ ಮಾಡಿರೆಂದು ಹೇಳಲು ನಾನು ಹಿಂಜರಿಯೆನು. ಆದರೆ ಧರ್ಮವು ಅಂತಃಕರಣದ ಮಾತಾಗಿರುವುದು. ಪ್ರಾಪಂಚಿಕ ಅನಾನುಕೂಲತೆಗಳನ್ನು ಕಳೆದುಕೊಳ್ಳಲೋಸುಗ ಧರ್ಮವನ್ನು ತ್ಯಜಿ

ಸುವುದು ಸರ್ವಥಾ ಯೋಗ್ಯವಾಗದು. ಪಂಚಮರಿಗೆ ಈಗಾಗುತ್ತಿರುವ ಅಮಾನುಷ ಛಲನೆ ಹಿಂದುಧರ್ಮದ ಅಂಗವಾಗಿದ್ದರೆ, ಅವರಾಗಲಿ ಧರ್ಮ ಧರ್ಮವೆಂದು ಕುಣಿದು ಧರ್ಮದ ಹೆಸರಿನಿಂದ ಅನ್ಯಾಯಗಳನ್ನು ಮಾಡ ಲೇಳುವ ನನ್ನಂತಹ ಜನರಾಗಲಿ ಹಿಂದು ಧರ್ಮವನ್ನು ತ್ಯಜಿಸುವುದು ಕರ್ತವ್ಯವಾಗುವುದು. **ಆದರೆ ಅಸ್ಪೃಶ್ಯತೆ ಸರ್ವಥಾ ಹಿಂದು ಧರ್ಮದ ಅಂಗವಲ್ಲವೆಂದು ನಾನು ನಂಬಿದ್ದೇನೆ. ಅದು ಅದರ ಅಂಗವಾಗಿರದೆ ಶಕ್ಯವಿದ್ದ ಎಲ್ಲ ಪ್ರಯತ್ನಗಳಿಂದ ತೆಗೆದು ಹಾಕಲು ಯೋಗ್ಯವಾದ ಅದರ ಮಲವಾಗಿರುವುದು.** ಹಿಂದು ಧರ್ಮಕ್ಕೆ ಅಂಟಿಕೊಂಡಿದ್ದ ಈ ಕಲಂಕವನ್ನು ನಾಶಗೊಳಿಸಲು ಟೊಂಕ ಕಟ್ಟಿರುವ ಹಿಂದು ಸುಧಾರಕರ ಸೇನೆಯೇ ಈಗ ಸಿದ್ಧವಾಗಿರುವುದು. ಆದುದರಿಂದ ಧರ್ಮಾಂತರವು ಸರ್ವಥಾ ಉಪಾಯವಲ್ಲವೆಂದು ನನ್ನ ಅಭಿಪ್ರಾಯ—

# ಪಂಚಮರು-

ಈ (ಮದ್ರಾಸ) ಇಲಾಖೆಯಲ್ಲಿ ಅಸ್ಪೃಶ್ಯರನ್ನು ನಡೆಯಿಸಿಕೊಳ್ಳುವ ಕ್ರೂರರೀತಿಯಿಂದ ಮತ್ತಾವಲ್ಲಿಯೂ ನಡೆಯಿಸಿಕೊಳ್ಳುವುದಿಲ್ಲ. ಅಸ್ಪೃಶ್ಯನ ನೆರಳಿನಿಂದಲೂ ಬ್ರಾಹ್ಮಣನಿಗೆ ಮೈಲಿಗೆಯಾಗುವುದು. ಬ್ರಾಹ್ಮಣರ ಕೇರಿಗಳಲ್ಲಿಯೂ ಅವನು ಹಾಯಲಾಗದು. ಬ್ರಾಹ್ಮಣೇತರರ ವರ್ತನವಾದರೂ ಹೀಗೆಯೇ. ಬ್ರಾಹ್ಮಣ ಬ್ರಾಹ್ಮಣೇತರರ ನಡುವೆ ಸಿಕ್ಕು ಇಲ್ಲಿ ಪಂಚಮನೆಂದು ಕರೆಯಲ್ಪಡುವ ಅಸ್ಪೃಶ್ಯನು ನುಚ್ಚುನುರಿಯಾಗಿರುವನು. ಇತ್ತ ಮದ್ರಾಸವೆಂದರೆ ಭವ್ಯವಾದ ದೇವಾಲಯಗಳ ಮತ್ತು ಧರ್ಮಶ್ರದ್ಧೆಯ ಭೂಮಿಯಾಗಿರುವುದು! ಭವ್ಯವಾದ ತಿಲಕಮುದ್ರೆಗಳಿಂದಲೂ ದೀರ್ಘ ಕೇಶಗಳಿಂದಲೂ ಸ್ವಚ್ಛವಾದ ಬರಿಮೈಗಳಿಂದಲೂ ಇಲ್ಲಿಯ ಜನರು ಋಷಿಗಳಂತೆ ಕಾಣಿಸುತ್ತಾರೆ. ಆದರೆ ಅವರ ಧರ್ಮವೆಲ್ಲವು ಈ ಬಾಹ್ಯಾಚಾರಗಳಲ್ಲಿಯೇ ಮುಗಿದಿರುವಂತೆ ತೋರುತ್ತದೆ. ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಉದಯಿಸಿದ ಭೂಮಿಯಲ್ಲಿ ಅತ್ಯಂತ ಉದ್ಯೋಗಶೀಲರೂ ಹಿತಕಾರಿಗಳೂ ಆದ ನಾಗರಿಕರ ವಿಷಯದಲ್ಲಿ ಈ ಬಗೆಯ ರಾಕ್ಷಸವೃತ್ತಿ ಇರುವ ಕಾರಣವನ್ನು ತಿಳಿವುದು ಕಠಿಣವು. ನಮ್ಮ ಬಾಂಧವರಾದ ಅಸ್ಪೃಶ್ಯರ ವಿಷಯದಲ್ಲಿ ಈ ತೆರದ ಗರ್ಹ್ಯವಾದ ವರ್ತನವನ್ನು ನಾನು ನನ್ನ ಕಣ್ಣಿಂದ ನೋಡುತ್ತಿದ್ದರೂ ಸಾಕ್ಷಾತ್ಕಾರ ವಿಷಯದಲ್ಲಿ ನಾನು ನಿರಾಶನಾಗಿಲ್ಲ. ಅಸ್ಪೃಶ್ಯತೆಯನ್ನು ತೆಗೆದುಹಾಕಿದ ಹೊರತು ಸ್ವರಾಜ್ಯವು ನಮಗೆ ಬಾರದು, ಎಂಬ ಮಾತನ್ನು ಇಲ್ಲಿಯ ಎಲ್ಲ ದೊಡ್ಡ ದೊಡ್ಡ ಸಭೆಗಳಲ್ಲಿ ಅತ್ಯಂತ ಸ್ಪಷ್ಟವಾಗಿ ನಾನು ಹೇಳಿರುವೆನು.

**ಜಗತ್ತಿನಲ್ಲಿ ಬಹುಶಃ ಎಲ್ಲ ಭಾಗಗಳಲ್ಲಿಯು ಜನರು ನಮ್ಮನ್ನು ಮಹಾರೋಗಿಗಳಂತೆ ನಡೆಯಿಸಿಕೊಳ್ಳುತ್ತಿರುವುದರ ಕಾರಣವು ನಾವು ನಮ್ಮ ಜನಾಂಗದ ೧/೫ ಭಾಗವನ್ನು ಹಾಗೆ ನಡೆಯಿಸಿಕೊಳ್ಳುತ್ತಿರುವುದೇ** ಎಂದು ನಾನು ಅವರಿಗೆ ಹೇಳಿರುವೆನು.

ನಾವು ಅಸಹಯೋಗವನ್ನವಲಂಬಿಸುವದು ಇಂಗ್ಲಿಷರಲ್ಲಿಯುಷ್ಟೇ ಹೃದಯುಪರಿವರ್ತನೆಯಾಗಬೇಕೆಂದಲ್ಲ; ಆದರೆ ನಮ್ಮಲ್ಲಿಯೂ ಆಗಬೇಕೆಂದು. ಮೊದಲು ನಮ್ಮಲ್ಲಿ ಪರಿವರ್ತನೆಯಾಗಬೇಕು; ಆ ಬಳಿಕ ಸಹಜವಾಗಿ ಇಂಗ್ಲಿಷರಲ್ಲಿಯೂ ಆಗಬೇಕೆಂದು ನನ್ನ ನಿರೀಕ್ಷಣೆ. ಬಹುಕಾಲದಿಂದ ಬಂದ ಅಸ್ಪೃಶ್ಯತೆಯ ದೋಷವನ್ನು ಒಂದು ವರ್ಷದಲ್ಲಿ ತೆಗೆದೊಗೆದ ರಾಷ್ಟ್ರವು, ವೈವೋಲಿಸ ಮಾಸಿದ ಬಟ್ಟೆಗಳನ್ನು ಸಹಜವಾಗಿ ಬಿಟ್ಟು ಕೊಡುವಂತೆ ಕುಡಕತನವನ್ನು ಬಿಟ್ಟು ಕೊಡುವ ರಾಷ್ಟ್ರವು, ಮತ್ತು ಆಲಸ್ಯವನ್ನು ಬಿಟ್ಟು ತನ್ನ ನೈಜವಾದ ನೂಲುವ ಮತ್ತು ನೆಯ್ಯುವ ಉದ್ಯೋಗವನ್ನು ಪುನಃ ಅವಲಂಬಿಸಿ ಒಂದು ವರ್ಷದಲ್ಲಿ ೬೦ ಕೋಟಿ ರೂಪಾಯಿಗಳ ಬಟ್ಟೆಯನ್ನು ನಿರ್ಮಿಸುವ ರಾಷ್ಟ್ರವು ನಿಜವಾಗಿಯೂ ನವಚೈತನ್ಯಪೂರ್ಣವಾದ ರಾಷ್ಟ್ರವು. ಈ ನವಚೈತನ್ಯದ ಪರಿಣಾಮವು ಅಖಿಲ ಪ್ರಪಂಚದ ಮೇಲೆ ಆಗದಿರದು. ಈ ನವಚೈತನ್ಯವು ದೇವರಿರುವನು ಮತ್ತು ಅವನು ಭಕ್ತವತ್ಸಲನಾಗಿರುವನು ಎಂಬ ಮಾತನ್ನು ನಾಸ್ತಿಕರಿಗೂ ಸ್ಪಷ್ಟಗೊಳಿಸುವುದು. ಆದುದರಿಂದ ಹಿಂದುಸ್ಥಾನದಲ್ಲಿ ಈ ಬಗೆಯಾಗಿ ನವಚೈತನ್ಯವುಂಟಾದರೆ ಸ್ವರಾಜ್ಯವನ್ನು ಸ್ಥಾಪಿಸಲು ಆದಕ್ಕಿರುವ ಅಧಿಕಾರವನ್ನು ವಿಶ್ವದೊಳಗಿನ ಯಾವ ಶಕ್ತಿಯೂ ವಿರೋಧಿಸಲಾರದು. ಹಿಂದುಸ್ಥಾನದ ಕ್ಷಿತಿಜದಲ್ಲಿ ಮೋಡಗಳು ಇಷ್ಟು ಮುಸುಕಿದ್ದರೂ ಹಿಂದುಸ್ಥಾನವು ತಾನು ಮಾಡಿದ ಅಸ್ಪೃಶ್ಯರ ಛಲನೆಗೋಸುಗ ಪಶ್ಚಾತ್ತಾಪ ಪಡಲು ಆರಂಭಿಸಿದೊಡನೆ, ಮತ್ತು ಪರದೇಶದ ಬಟ್ಟೆಗಳನ್ನು ಬಹಿಷ್ಕರಿಸಲು ನಿಶ್ಚಯಿಸಿದೊಡನೆ, ಕಠಿಣ ಹೃದಯದವರಾಗಿ ತೋರುವ ಇಂಗ್ಲಿಷ ಅಧಿಕಾರಿಗಳೇ ಹಿಂದುಸ್ಥಾನವನ್ನು 'ಸ್ವತಂತ್ರವೂ ಪರಾಕ್ರಮಶಾಲಿಯೂ ಆದ ದೇಶ'ವೆಂದು ಆದರದಿಂದ ಕಾಣದೆ ಇರಲಾರರು. ಆದುದರಿಂದ ಹಿಂದು ಜನರು ಮನಸ್ಸು ಮಾಡಿದರೆ ಅಸ್ಪೃಶ್ಯರೆಂದು ಕರೆಯಲ್ಪಡುವವರನ್ನು ದಾಸ್ಯದಿಂದ ಮುಕ್ತಗೊಳಿಸಿ ತಾವು ಉಪಭೋಗಿಸುತ್ತಿರುವ ಅಧಿಕಾರಗಳನ್ನು ಅವರಿಗೂ ಕೊಡಲು ಮುಂದೆ ಬರಲು ಶಕ್ಯವಿರುವುದೆಂದು ನಾನು ನಂಬುತ್ತೇನೆ. ನಮ್ಮದೇ ಒಂದು ವಿಸ್ತೃತವಾದ ಯೋಜನೆಯನ್ನು ಯೋಚಿಸಿ ಈ ಬಗೆಯ ಸ್ಥಿತ್ಯಂತರವನ್ನುಂಟು ಮಾಡ

ಬೇಕೆಂದರೆ ಅದಾಗದು. ಅದಕ್ಕೆ ದೇವರ ಕೃಪೆಬೇಕು. ನಮ್ಮಲ್ಲಿ ಪ್ರತಿಯೊಬ್ಬರ ಅಂತಃಕರಣದಲ್ಲಿ ದೇವರು ಆಶ್ಚರ್ಯಕರವಾದ ಪರಿವರ್ತನೆಯನ್ನು ಮಾಡುತ್ತಿರುವನೆಂಬುದನ್ನು ಅಲ್ಲಗಳೆವರಾರು? ಅದು ಹೇಗೆಯೇ ಇರಲಿ. ಅಸ್ಪೃಶ್ಯ ಬಂಧುವಿಗೆ ಎಲ್ಲೆಲ್ಲಿಯೂ ಸಾಹಾಯ್ಯವನ್ನೀಯುವುದು ಪ್ರತಿಯೊಬ್ಬನ ಕರ್ತವ್ಯವು. ಮತ್ತು ಹಿಂದು ಧರ್ಮದ ತತ್ವವನ್ನರಿಯದೆ ಹೆಸರಿಗೆ ಮಾತ್ರ ಹಿಂದುಗಳಾಗಿರುವ ಜನರಿಗೆ, **ವೇದಗಳಲ್ಲಿ, ಉಪನಿಷತ್ತುಗಳಲ್ಲಿ, ಉಪದಿಷ್ಟವಾದ ಹಿಂದು ಧರ್ಮವು, ಭಗವದ್ಗೀತೆಯಿಂದ, ಶಂಕರಾಚಾರ್ಯರಿಂದ ಮತ್ತು ರಾಮಾನುಜಾಚಾರ್ಯರಿಂದ ಉಪದಿಷ್ಟವಾದ ಹಿಂದುಧರ್ಮವು, ಯಾವ ಮನುಷ್ಯನನ್ನೂ, ಅವನು ಎಷ್ಟೇ ಹೀನದೆಸೆಗೆ ಬಂದಿರಲಿ ಅಸ್ಪೃಶ್ಯನೆಂದು ತಿಳಿಯಲು ಸರ್ವಥಾ ಒಪ್ಪದು,** ಎಂಬದನ್ನು ತಿಳಿಸಿಕೊಡುವುದು ಪ್ರತಿಯೊಬ್ಬನ ಕರ್ತವ್ಯವು. ಅಸ್ಪೃಶ್ಯತೆ ಅಹಿಂಸಾ ತತ್ವಕ್ಕೆ ಅತ್ಯಂತ ವಿರೋಧವಾಗಿರುವದೆಂಬ ಮಾತನ್ನು ಪ್ರತಿಯೊಬ್ಬ ಸುಧಾರಕನು ಪರಂಪರಾಪ್ರಿಯರಾದವರಿಗೆ ಆದಷ್ಟು ಸೌಮ್ಯರೀತಿಯಿಂದ ತಿಳಿಸಿಕೊಡುವುದು ಅಗತ್ಯವು.



# ಅಸಹ್ಯವಾದ ತತ್ವವು

(ತ್ರಾವಣಕೋರಕ್ಕೆ ಮಹಾತ್ಮಾ ಗಾಂಧಿಯವರು ಕೊಟ್ಟ ಸಂದೇಶವು. ನಾಗರ ಕೊಯಿಲ ಭಾಷಣದಿಂದ)

ಹಿಂದುಸ್ಥಾನದ ಅತ್ಯಂತ ಸುಂದರವಾದ ಈ ಪ್ರದೇಶಕ್ಕೆ ನಾನು ಎರಡನೆಯ ಸಲ ಬಂದುದರಿಂದ ನನಗೆ ಬಹು ಆನಂದವಾಗಿರುವದೇನೋ ನಿಜವು. ಆದರೆ ಈ ಸುಂದರವಾದ ಪ್ರದೇಶದಲ್ಲಿ ಹಿಂದುಸ್ಥಾನದ ಎರಡನೆಯ ಯಾವ ಭಾಗದಲ್ಲಿಯೂ ಕಾಣ ಬರದಿದ್ದ ಅಸ್ಪೃಶ್ಯತೆಯ ಅಸಹ್ಯಸ್ವರೂಪವನ್ನು ಕಂಡು ನನಗೆ ವ್ಯಥೆಯಾದುದನ್ನು ನಾನು ಬಚ್ಚಿಡಲಾರೆನು. ಪ್ರಗತಿಪರವಾದ ಹಿಂದು ಸಂಸ್ಥಾನದಲ್ಲಿ ಅಸ್ಪೃಶ್ಯರನ್ನು ನೋಡಿದರೆ ಮೈಲಿಗೆ, ಅವರು ಸಮೀಪದಲ್ಲಿ ಹಾಯ್ದು ಹೋದರೆ ಮೈಲಿಗೆ ಎಂಬ ದುಷ್ಟಭಾವನೆ ಇದ್ದುದನ್ನು ನೋಡಿ ಹಿಂದುವಾದ ನನ್ನ ಅಂತಃಕರಣಕ್ಕೆ ನಾಚಿಕೆಯಾಗುತ್ತದೆ. ಈ ಅಸ್ಪೃಶ್ಯತೆ ಎಂಬುದು ಹಿಂದು ಧರ್ಮದ ಮರ್ಮಗಳನ್ನೇ ನಿರ್ಜೀವಗೊಳಿಸುವ ಉಗ್ರವಾದ ವಿಷದಂತಿರುವದೆಂದು ನಾನು ಹೇಳುವಾಗ ನನ್ನ ಜವಾಬದಾರಿಯನ್ನು ನಾನು ಅರಿಯದೆ ಇಲ್ಲ. ಸಕಾಲದಲ್ಲಿ ಎಚ್ಚತ್ತು ಈ ವಿಷಯವನ್ನು ನಮ್ಮ ಹೃದಯದಿಂದ ತೆಗೆದೊಗೆಯದಿದ್ದರೆ ಹಿಂದು ಧರ್ಮಕ್ಕೇ ನಾಶವು ಒದಗದಿರದೆಂದು ನನಗೆ ಎನಿಸುತ್ತದೆ. ವಿವೇಕಕ್ಕೆ ಮಹತ್ವವನ್ನೀಯುವ ಯುಗದಲ್ಲಿ, ವಿಸ್ತೃತ ಪ್ರವಾಸದ ಈ ಯುಗದಲ್ಲಿ, ಧರ್ಮಗಳ ತುಲನಾತ್ಮಕ ಅಭ್ಯಾಸಗಳ ಈ ಯುಗದಲ್ಲಿ ಮುಟ್ಟಿದರೆ ಮೈಲಿಗೆ, ಹತ್ತಿರ ಹಾಯ್ದರೆ ಮೈಲಿಗೆ, ಕಂಡರೆ ಮೈಲಿಗೆ ಎನ್ನುತ್ತ, ಅಸ್ಪೃಶ್ಯರೆಂದು ಕರೆಯಲ್ಪಡುವ ನಮ್ಮ ಬಾಂಧವರನ್ನು ಅಯೋಗ್ಯವಾಗಿ ನಡೆಯಿಸಿಕೊಳ್ಳುವ ಈ ಅಸಹ್ಯವಾದ ತತ್ವವನ್ನು ಎತ್ತಿಹಿಡಿಯಲು ಜನರು, ಸುಶಿಕ್ಷಿತಜನರು ಮುಂದೆ ಬರುತ್ತಿರುವದು ಹೇಗೋ ನನಗೆ ಗೊತ್ತಾಗದು. ಹಿಂದು ಧರ್ಮದ ಅಭ್ಯಾಸಿಯಾದ ನಾನು, ಅಕ್ಷರಶಃ, ತತ್ವತಃ, ಹಿಂದುಧರ್ಮವನ್ನು ಆಚರಿಸಲು ಇಚ್ಛಿಸುವ ನಾನು, ಈ ಭಯಂಕರವಾದ ತತ್ವಕ್ಕೆ ಎಲ್ಲಿಯೂ ನನಗೆ ಆಧಾರವು ದೊರೆತಿಲ್ಲವೆಂದು ನಿಮಗೆ ಹೇಳಲು ಬಯಸುತ್ತೇನೆ. ಸಂಸ್ಕೃತ

ಭಾಷೆಯಲ್ಲಿದ್ದುದೆಲ್ಲವೂ, ಶಾಸ್ತ್ರಗಳಲ್ಲಿ ಉಕ್ತವಾದುದೆಲ್ಲವೂ ನಮಗೆ ಪ್ರಮಾಣವಾಗಿದೆ ಎಂದು ಅಜ್ಞಾನದಿಂದ ನಾವು ನಂಬಕೂಡದು. ಯಾವುದು ನೈತಿಕ ಮೂಲತತ್ವಗಳಿಗೂ ಮತ್ತು ಸುಸಂಸ್ಕೃತ ಬುದ್ಧಿವಾದಕ್ಕೂ ವಿರೋಧವಾಗುವದೋ ಅದು ಎಷ್ಟೇ ಪುರಾತನವಾಗಿದ್ದರೂ ನಮಗೆ ಮಾರ್ಗದರ್ಶಕವಾದ ಶಾಸ್ತ್ರವು ಆಗದು. ನಾನು ಹೇಳುವ ಮಾತಿಗೆ ವೇದಗಳಲ್ಲಿಯೂ, ಮಹಾಭಾರತದಲ್ಲಿಯೂ, ಭಗವದ್ಗೀತೆಯಲ್ಲಿಯೂ ಸಾಕಷ್ಟು ಆಧಾರವಿರುವುದು. ಆದುದರಿಂದ ಪ್ರಗತಿ ಪ್ರಿಯರಾದ ತ್ರಾವಣಕೋರಿನ ಮಹಾರಾಣಿಯವರಿಗೆ ತಮ್ಮ ಆಳಿಕೆಯಲ್ಲಿ ಈ ಅಸ್ಪೃಶ್ಯತೆಯ ಕಲಂಕವನ್ನು ದೂರಗೊಳಿಸಲು ಶಕ್ಯವಾಗಲೆಂದು ನಾನು ಹಾರೈಸುತ್ತೇನೆ. ಸ್ತ್ರೀಯೊಬ್ಬಳು ತನ್ನ ಆಳಿಕೆಯಲ್ಲಿ ಬುನಾದಿಯಿಂದ ದಾಸ್ಯದಲ್ಲಿ ಕೊಳೆಯುತ್ತಿದ್ದ ಜನಾಂಗವನ್ನು ಸ್ವತಂತ್ರಗೊಳಿಸಿದೆನೆಂದು ಹೇಳಲು ಮುಂದುವರಿವುದಕ್ಕಿಂತ ಉದಾತ್ತವಾದ ಕಾರ್ಯವು ಇನ್ನಾವುದು ?

## ಧರ್ಮಾಚಾರ್ಯರೇ, ಸವರ್ಣರೇ, ಏಳಿರಿ.

ಈ ವಿಷಯದಲ್ಲಿ ಮಹಾರಾಣಿಯವರಿಗೂ ಅವರ ಮಂತ್ರಿಗಳಿಗೂ ಇರುವ ತೊಂದರೆಗಳನ್ನು ನಾನು ಬಲ್ಲೆನು. ಸರಕಾರವು ಎಷ್ಟೇ ಅನಿಯಂತ್ರಿತವಾಗಿದ್ದರೂ ಇಂತಹ ಸುಧಾರಣೆಗಳಲ್ಲಿ ಅಂಜಂಜುತ್ತ ಮುಂದೆ ಕಾಲಿಕ್ಕುವುದು. ಸರಕಾರವು ಬುದ್ಧಿಯುಳ್ಳುದಾಗಿದ್ದರೆ ಇಂತಹ ಸುಧಾರಣೆಗಳ ಚಳವಳಿಯನ್ನು ಪ್ರೋತ್ಸಾಹಿಸುವುದು. ಸರಕಾರವು ಮೂರ್ಖವಾಗಿದ್ದರೆ ಜನತೆಯ ಅಭಿಪ್ರಾಯವನ್ನು ಲೆಕ್ಕಿಸದೆ ಇಂಥ ಚಳವಳಿಗಳನ್ನು ತಗ್ಗಿಸಲು ಹಿಂಸಾಮಾರ್ಗವನ್ನು ಕೈಕೊಳ್ಳುವುದು. ವಾಯ್ಕಂ ಸತ್ಯಾಗ್ರಹದ ನನ್ನ ಸ್ವಂತ ಅನುಭವದಿಂದ ನಾನು ಕಂಡುಕೊಂಡುದೇನಂದರೆ: ನಿಮ್ಮ ಸರಕಾರವು ಈ ಚಳವಳಿಗೆ ವಿಘ್ನವನ್ನು ತಂದೊಡ್ಡುವುದಿಲ್ಲ ಇಷ್ಟೇ ಅಲ್ಲ, ಆದರೆ ಈ ಸುಧಾರಣೆಯನ್ನು ಸಾಧಿಸಲು ಬಲವನ್ನು ಪಡೆಯಲು ಮುಂದುವರಯುತ್ತದೆ. ಈ ಕೆಲಸವನ್ನು ಮೊದಲು ತ್ರಾವಣಕೋರದ ಪ್ರಜೆಗಳು ಪ್ರಾರಂಭಿಸಬೇಕು. ಅಸ್ಪೃಶ್ಯರೆಂದೂ ಅವರ್ಣರೆಂದೂ ಕರೆಯಲ್ಪಡುವ ಜನರಲ್ಲಿಯೇ ಮೊದಲು ಈ ಚಳವಳಿ ಪ್ರಾರಂಭವಾಗಬೇಕೆಂದು ನಾನು ಹೇಳುವುದಿಲ್ಲ. 'ಹಿಂದುವು' ಮತ್ತು ಅವನು 'ಅವ

ರ್ಗನು' ಎಂಬುದೇ ಒಂದು ಒಗೆಯ ವಿರೋಧೋಕ್ತಿ. ಅದು ಹಿಂದು ಧರ್ಮಕ್ಕಿರುವ ಕಲಂಕವು. ಅನೇಕ ಸಂದರ್ಭಗಳಲ್ಲಿ ಈ ಕಲಂಕವನ್ನು ತೆಗೆಯುವ ಉಪಾಯವನ್ನು ಕೈಕೊಳ್ಳುವುದು ಅಸ್ಪೃಶ್ಯರ ಕೆಲಸವಿರದೆ ಅದು ಸವರ್ಣ ಹಿಂದುಗಳ ಕೆಲಸವು. ಸವರ್ಣ ಹಿಂದುಗಳು ತಮಗೆ ಅಂಟಿಕೊಂಡಿದ್ದ ಅಸ್ಪೃಶ್ಯತೆಯ ಪಾಪವನ್ನು ತೊಳೆದುಕೊಳ್ಳಲಿಕ್ಕೆ ಬೇಕು. ಅಸ್ಪೃಶ್ಯತೆ ಎಂಬುದು ಮಹತ್ಪಾತಕವೆಂದು ಹೇಳಿ ಕೈಮುಚ್ಚಿಕೊಂಡು ಕುಳಿತರೆ ಕೆಲಸವಾಗದು. ಅಪರಾಧವು ಕಣ್ಣೆದುರಲ್ಲಿ ನಡೆವಾಗ ಕೈಮುಚ್ಚಿಕೊಂಡು ಕುಳಿತವನು ಆ ಅಪರಾಧದಲ್ಲಿ ಭಾಗಿಯಾದಂತೆಯೇ ಎಂದು ಕಾಯಿದೆ ಹೇಳುತ್ತಿದೆ. ಮತ್ತು ಅದು ಹೇಳುವುದಾದರೂ ಯೋಗ್ಯವು. ಆದುದರಿಂದ ನೀವು ನಿಮ್ಮ ಚಳವಳಿಯನ್ನು ಪ್ರಾರಂಭಿಸಿ ಅದನ್ನು ಕಾಯಿದೆಯನ್ನನುಸರಿಸಿ ಮುಂದುವರಿಸಬೇಕು. ಈ ಅತ್ಯವಶ್ಯಕವಾದ ಸುಧಾರಣೆಯನ್ನು ವಿರೋಧಿಸುವ ಬ್ರಾಹ್ಮಣರಿಗೆ ನನ್ನ ಕೂಗು ಕೇಳಲಿ! **ಧರ್ಮರಕ್ಷಕರಾಗಿರಬೇಕಾದ ಧರ್ಮಾಚಾರ್ಯರೇ ಧರ್ಮವನ್ನು ನಾಶಗೊಳಿಸಲು ಕಾರಣರಾಗಿರುವರೆಂಬುದು ದುಃಖದ ಮಾತಿದ್ದರೂ ಐತಿಹಾಸಿಕ ಸತ್ಯವಿರುವುದು.** ತಾವು ರಕ್ಷಿಸಬೇಕಾಗಿದ್ದ ಧರ್ಮವನ್ನು ಇಲ್ಲಿಯು ಮತ್ತು ಇತರ ಸ್ಥಳಗಳಲ್ಲಿಯು ಬ್ರಾಹ್ಮಣ ಧರ್ಮಾಚಾರ್ಯರು ಅಜ್ಞಾನವಶರಾಗಿ ಹಾಳುಗೈಯುತ್ತಿರುವುದನ್ನು ನಾನು ಕಣ್ಮುಟ್ಟ ನೋಡುತ್ತಿದ್ದೇನೆ. ಅಸಹ್ಯವಾದ ಮೂಢಭಾವನೆಯನ್ನೂ ಭಯಂಕರವಾದ ಅನ್ಯಾಯವನ್ನು ಎತ್ತಿ ಹಿಡಿಯಲು ಅವರ ಬುದ್ಧಿಯು ಉಪಯೋಗವಾದರೆ ಅದು ಮಣ್ಣಿನ ಬೆಲೆ ಬಾಳದು! ಸಕಾಲದಲ್ಲಿ ದೇಶಕಾಲದ ಪರಿಸ್ಥಿತಿಯನ್ನರಿತು, ಇಚ್ಛೆ ಇರಲಿ ಇಲ್ಲದಿರಲಿ ನಮ್ಮನ್ನೂ ಅವರನ್ನೂ ಸತ್ಯಮಾರ್ಗದಲ್ಲಿ ಎಳೆದೊಯ್ಯುತ್ತಿರುವ ಕಾಲಪ್ರವಾಹವನ್ನನುಸರಿಸಲಿ. ಜಗತ್ತಿನಲ್ಲಿಯ ಎಲ್ಲ ಧರ್ಮಗಳು ಉಳಿದ ವಿಷಯದಲ್ಲಿ ಎಷ್ಟೇ ಭಿನ್ನಾಭಿಪ್ರಾಯವುಳ್ಳವಾಗಿದ್ದರೂ ಸತ್ಯದ ಹೊರತು ಇನ್ನಾವುದೂ ಶಾಶ್ವತವಾಗಿ ಬಾಳದೆಂದು ಏಕ ಕಂಠದಿಂದ ಸಾರುತ್ತವೆ.

## ಸುಧಾರಕನ ಮಾರ್ಗವು ಅಥವಾ ಸತ್ಯಾಗ್ರಹ ಶಾಸ್ತ್ರವು.

ತಾಳ್ಮೆಯನ್ನು ಕಳೆದುಕೊಂಡ ಸುಧಾರಕನಿಗೊಂದು ಎಚ್ಚರಿಕೆಯ ಮಾತು: ನ್ಯಾಯ್ಯವೂ, ಸರಳವೂ, ಅಕುಂಚಿತವೂ ಆದ ಮಾರ್ಗದಲ್ಲಿ

ಅವನು ನಡೆಯದಿದ್ದರೆ ತಾನೂ ಕೆಡುವನಲ್ಲದೆ ತಾನು ಕೈಕೊಂಡ ಕಾರ್ಯಕ್ಕೂ ಭಂಗವನ್ನು ತಾರದಿರನು. ಸತ್ಯಾಗ್ರಹವೆಂಬ ಅನುಪಮವೂ ಅನೌಲ್ಯವೂ ಆದ ಅಸ್ತ್ರವನ್ನು ಸುಧಾರಕನ ಕೈಯಲ್ಲಿ ನಾನು ಕೊಟ್ಟಿರುವೆನೆಂದು ಅಭಿಮಾನದಿಂದ ಹೇಳುತ್ತೇನೆ. ಆದರೆ ಸತ್ಯಾಗ್ರಹವು ಯಶಸ್ವಿಯಾಗಬೇಕಾದರೆ ಬಹು ಕಠಿಣವಾದ ನಿಯಮಗಳನ್ನು ಪಾಲಿಸಬೇಕಾಗುವುದು. ಪರಮಾತ್ಮನಲ್ಲಿ ಮತ್ತು ತನ್ನ ಉದ್ದೇಶದಲ್ಲಿ ಸತ್ಯಾಗ್ರಹಿಗೆ ಸಂಪೂರ್ಣ ವಿಶ್ವಾಸವಿದ್ದರೆ ಅವನೆಂದೂ ಹಿಂಸೆಯನ್ನಾಚರಿಸನು. ಮತ್ತು ತನ್ನ ವಿಷಯದಲ್ಲಿ ಅನ್ಯಾಯವನ್ನೂ ಹಿಂಸೆಯನ್ನೂ ಆಚರಿಸಿದ ಕಡುಹಗೆಯನ್ನಾದರೂ ಅವನು ದ್ವೇಷಿಸನು. ಹಿಂಸೆಯಿಂದ ಸತ್ಯವನ್ನು ಸಮರ್ಥಿಸುವುದು ಸರ್ವಥಾ ಶಕ್ಯವಾಗುವುದಿಲ್ಲವೆಂದು ಹೇಳಲು ನನಗೆ ಅನುಮಾನವೆನಿಸುವುದಿಲ್ಲ. ಆದುದರಿಂದ ಸತ್ಯಾಗ್ರಹಿಯು ತನ್ನ ವೈರಿಗಳೆಂಬುವವರನ್ನೂ ವಿರೋಧಿಗಳನ್ನೂ ಹಿಂಸೆಯ ಮಾರ್ಗವನ್ನವಲಂಬಿಸದೆ ಪ್ರೇಮದಿಂದಲೇ ವಶ ಮಾಡಿಕೊಳ್ಳಲು ಯತ್ನಿಸುತ್ತಾನೆ. ಅವನ ಉಪಾಯಗಳು ಮೃದುವೂ ಸಭ್ಯವೂ ಆಗಿರುವುವು. ಅವನೆಂದೂ ಇದ್ದುದನ್ನು ಬೆಳಸಿ ಹೇಳುವುದಿಲ್ಲ. ಅಹಿಂಸೆಗೆ ಪ್ರೇಮವೆಂಬುದು ಇನ್ನೊಂದು ಅರ್ಥವು. ಆದುದರಿಂದ ಅಹಿಂಸಾಮಾರ್ಗವನ್ನವಲಂಬಿಸಿದವನಿಗೆ ಆತ್ಮಾಹುತಿಯನ್ನುಳಿದು ಬೇರೊಂದು ಶಸ್ತ್ರವೇ ಇಲ್ಲ. ನನ್ನ ಅಭಿಪ್ರಾಯದಿಂದ ಅಸ್ಪೃಶ್ಯತಾ ನಿವಾರಣೆಯ ಕಾರ್ಯವು ಮುಖ್ಯತಃ ಧಾರ್ಮಿಕವೂ ಆತ್ಮಶುದ್ಧಿಯದೂ ಆಗಿರುವುದರಿಂದ ಅದರಲ್ಲಿ ದ್ವೇಷಕ್ಕೆ ಅವಿಚಾರಕ್ಕೆ, ಆತುರತೆಗೆ ಅಥವಾ ಅತಿಶಯೋಕ್ತಿಗೆ ಆಸ್ಪದವಿರುವುದಿಲ್ಲ. ಸತ್ಯಾಗ್ರಹವು ಅತ್ಯಂತ ಬಲಿಷ್ಠವೂ ತೀಕ್ಷ್ಣವೂ ಆದ ಶಸ್ತ್ರವು ಆಗಿರುವುದು. ಆದುದರಿಂದ ಸತ್ಯಾಗ್ರಹಿಯಾದವನು ಎಲ್ಲ ಉಪಾಯಗಳನ್ನು ಯೋಚಿಸಿ, ಅವುಗಳಿಂದ ಕಾರ್ಯವಾಗದೆಂದು ಕಂಡ ಮೇಲೆಯೇ ಅವನು ಸತ್ಯಾಗ್ರಹ ಶಸ್ತ್ರವನ್ನು ಆಶ್ರಯಿಸುವನು. ಅವನು ಪುನಃ ಪುನಃ ಯೋಗ್ಯ ಅಧಿಕಾರಿಗಳ ಮುಂದೆ ತನ್ನ ಪ್ರಶ್ನೆಯನ್ನಿಡುವನು; ಜನತೆಯ ಅಂತಃಕರಣವನ್ನು ತನ್ನ ಕಾರ್ಯಕ್ಕೋಸುಗ ವಶಮಾಡಿಕೊಳ್ಳಲು ಯತ್ನಿಸುವನು; ತನ್ನ ಉದ್ದೇಶವನ್ನು ಜನತೆಗೆ ತಿಳಿಯಹೇಳುವನು;

ಕೇಳುವವರೆದುರಿಗೆಲ್ಲ ತನ್ನ ವಿಚಾರವನ್ನು ಶಾಂತಿಯಿಂದಲೂ ಸೌಜನ್ಯ ದಿಂದಲೂ ಇಡುವನು; ಇಷ್ಟೆಲ್ಲವಾದ ಮೇಲೆಯೂ ಕಾರ್ಯವು ಸಾಧಿ ಸದಿದ್ದರೆ ನಿರ್ವಾಹವಿಲ್ಲದೆ ಸತ್ಯಾಗ್ರಹವನ್ನು ಅವನು ಕೈಕೊಳ್ಳು ವನು. ಆದರೆ ತನ್ನೊಳಗಿನ ಅಂತರ್ಧ್ವನಿಯು ಕರೆಯನ್ನು ಕೇಳಿ ಒಮ್ಮೆ ಸತ್ಯಾಗ್ರಹದ ಅಸ್ತ್ರವನ್ನು ಹಿಡಿದನೆಂದರೆ ಅದೇ ಒಂದು ಅಸ್ತ್ರದಿಂದಲೇ ಅವನು ಯುದ್ಧ ಮಾಡುವನು; ಅಲ್ಲದೆ ಬೇರೆ ಯಾವ ಉಪಾಯವನ್ನೂ ಅವನು ಕೈಕೊಳ್ಳನು. ಸತ್ಯಾಗ್ರಹ ಯುದ್ಧವನ್ನು ಒಮ್ಮೆ ಹೂಡಿದ ಬಳಿಕ ಅದರಿಂದ ಅವನು ಎಂದೂ ಹಿಂದೆಗೆಯನು. ಈ ಭೂಮಿಯಲ್ಲಿ ಎಲ್ಲೆ ಲ್ಲಿಯೂ ಹಬ್ಬಿದ ಅಸ್ಪೃಶ್ಯತೆಯನ್ನು ತೆಗೆದುಹಾಕಲು ಇಷ್ಟೊಂದು ಕಷ್ಟ ವನ್ನು ಸಹಿಸುವುದು ಅವಶ್ಯವಾಗಲಾರದೆಂದು ನಾನು ಹಾರೈಸುತ್ತೇನೆ.

———

# ಹಿಂದುತ್ವವು.

(ಶ್ರೀವೆಂಕ್ರಮನ್ ಭಾಷಣದಿಂದ)

## ಹಿಂದು ಧರ್ಮವೂ, ಅಸ್ಪೃಶ್ಯತೆಯೂ.

ಒಮ್ಮೆ ತ್ರಾವಣಕೋರವನ್ನು ನೋಡಿ ಹೋದಬಳಿಕ ಈ ಮೋಹಕವಾದ ಸೃಷ್ಟಿಸೌಂದರ್ಯದ ಸೊಬಗು, ಕನ್ಯಾಕುಮಾರಿಯ ನೈಜವಾದ ಆಕರ್ಷಕತೆಯೂ ಮತ್ತು ಇಲ್ಲಿಯ ಮಹಿಳೆಯರ ಸ್ವಾತಂತ್ರ್ಯವೂ ಸರಲತೆಯೂ ನನ್ನ ಅಂತಃಕರಣವನ್ನು ಸೆಳೆದವು. ಇವೆಲ್ಲವುಗಳಿಂದ ನನಗಾದ ಆನಂದದಲ್ಲಿ ದುಃಖವು ಬೆರೆಯದೆ ಇಲ್ಲ. ತ್ರಾವಣಕೋರದಲ್ಲಿ ಅಸ್ಪೃಶ್ಯತೆ ಅತ್ಯಂತ ಉಗ್ರಸ್ವರೂಪವನ್ನು ತಳೆದಿರುವುದು. ಶಿಕ್ಷಣದ ವಿಷಯದಲ್ಲಿ ಅತ್ಯುಚ್ಚಸ್ಥಾನದಲ್ಲಿರುವ ಮತ್ತು ಅತ್ಯಂತ ಪುರಾತನ ಹಿಂದು ಸಂಸ್ಥಾನಗಳಲ್ಲಿ ಒಂದಾದ ತ್ರಾವಣಕೋರಿನಲ್ಲಿ ಈ ಅನಿಷ್ಟವು ಇಷ್ಟೊಂದು ಭೀಕರವಾಗಿರುವುದನ್ನು ನೋಡಲು ನನಗೆ ದುಃಖವೆನಿಸುತ್ತದೆ. ನಾನು ಹಿಂದು ಧರ್ಮದ ಅಭಿಮಾನಿಯೂ, ಹಿಂದುತ್ವವು ನನ್ನ ರೋಮರೋಮಗಳಲ್ಲಿ ತುಂಬಿರುವುದೂ ಎಂದು ತಿಳಿದ ನನಗೆ ಅಸ್ಪೃಶ್ಯತೆಯ ಈ ಅತಿರೇಕದಿಂದ ಅತ್ಯಂತ ವ್ಯಥೆಯಾಗುತ್ತದೆ. ಹಿಂದು ಶಾಸ್ತ್ರಗಳೆಂದು ಹೇಳಲ್ಪಡುವ ಯಾವ ಗ್ರಂಥಗಳಲ್ಲಿಯೂ ಈಗ ಜನರು ಆಚರಿಸುವಂತಹ ಅಸ್ಪೃಶ್ಯತೆಗೆ ಒಂದಾದರೂ ಆಧಾರವು ನನಗೆ ದೊರೆತಿಲ್ಲ. ಹಿಂದು ಧರ್ಮವು ಅಸ್ಪೃಶ್ಯತೆಯನ್ನು ಸಮರ್ಥಿಸುವದೇ ನಿಜವಾಗಿದ್ದ ಪಕ್ಷದಲ್ಲಿ ಯಾವ ಯೋಚನೆಯನ್ನೂ ಮಾಡದೆ ನಾನು ಹಿಂದು ಧರ್ಮವನ್ನು ಆಗಲೇ ತ್ಯಜಿಸಿ ಬಿಡುತ್ತಿದ್ದೆನೆಂದು ಅನೇಕ ಸಾರೆ ಹೇಳಿರುವೆನು. ಯಾವದೊಂದು ಧರ್ಮವು ಧರ್ಮವಾಗಿರಬೇಕಾದರೆ ನೀತಿಶಾಸ್ತ್ರದ ಮೂಲ ತತ್ವಗಳಿಗೂ ನೀತಿಗೂ ಅವಿರುದ್ಧವಾಗಿರಲಿಕ್ಕೆ ಬೇಕು. ಆದರೆ ಅಸ್ಪೃಶ್ಯತೆ ಹಿಂದು ಧರ್ಮದ ಅಂಗವು ಇರದೆಂದು ನನ್ನ ನಂಬುಗೆ. ಆದುದರಿಂದ ಹಿಂದು ಧರ್ಮಕ್ಕೆ ನಾನು ಅಂಟಿಕೊಂಡಿರುವೆನು. ಆದರೆ ಈ ಘಾತುಕವಾದ ಅನ್ಯಾಯವು ದಿನದಿನವೂ ನನಗೆ ಹೆಚ್ಚು ಹೆಚ್ಚು ಅಸಹ್ಯವಾಗಿ ತೋರುತ್ತ

ನಡೆದಿದೆ. ಆದುದರಿಂದ ತ್ರಾವಣಕೋರಿನಲ್ಲಿ ಅಸ್ಪೃಶ್ಯತಾ ನಿವಾರಣೆ ಚಳ
ವಳಿ ನಡೆಸುದೆಂದು ಗೊತ್ತಾಗಲು ನಾನೂ ಅದರಲ್ಲಿ ಧುಮುಕಲು ಅನು
ಮಾನಪಡಿಸಲಿಲ್ಲ. ಇದರಲ್ಲಿ ನಾನು ಸೇರಿದುದು ಸರಕಾರವನ್ನು ತೊಂದರೆ
ಯಲ್ಲಿ ಹಾಕಲಿಕ್ಕೆ ಅಲ್ಲ. ಮಹಾರಾಣಿಯವರು ಯಾವಾಗಲೂ ಪ್ರಜೆಗಳ
ಹಿತಕ್ಕೋಸುಗ ಪ್ರಯತ್ನಿಸುತ್ತಿರುವರೆಂಬವನ್ನು ನಾನು ನಂಬಿರುವೆನು.*
ಈ ಬಗೆಯ ಸುಧಾರಣೆಯು ಅವರಿಗೂ ಇಷ್ಟವಿರುವುದು. ಈ ಅನ್ಯಾ
ಯವು ಬೇಗನೆ ದೂರಾದುದನ್ನು ನೋಡಲು ಅವರು ಆತುರರಾಗಿರುವ
ರೆಂದು ನಾನು ಹೇಳಿದರೆ ರಹಸ್ಯಭೇದವನ್ನು ಮಾಡಿದ ದೋಷಕ್ಕೆ ನಾನು
ಪಾತ್ರನಾಗಲಿಕ್ಕಿಲ್ಲವಷ್ಟೆ?

## ಸಂಸ್ಥಾನದ ಮತ್ತು ಪ್ರಜೆಗಳ ಕರ್ತವ್ಯವು.

ಸುಧಾರಣೆಗಳ ವಿಷಯದಲ್ಲಿ ಯಾವ ಸರಕಾರವಾದರೂ ತಾನೇ
ಮುಂದಾಗಲಾರದು. ಪ್ರಜೆಗಳ ಇಚ್ಛೆಯನ್ನು ತಿಳಿದುಕೊಂಡು ಅದಕ್ಕೆ
ಮೂರ್ತಸ್ವರೂಪವನ್ನು ಕೊಡುವುದು ಸರಕಾರದ ಕಾರ್ಯವು. ಪ್ರಜೆ
ಗಳಿಗೆ ಬೇಡವಾದ ಯಾವ ಸುಧಾರಣೆಯನ್ನೂ ಬೇಕಾದಷ್ಟು ಬಲಿಷ್ಠ
ಸರಕಾರವಿದ್ದರೂ ಜನರ ಮೇಲೆ ಹೇರಲಾರದು. ನಾನು ತ್ರಾವಣಕೋ
ರದ ಪ್ರಜೆಯಾಗಿದ್ದರೆ, ಎಷ್ಟು ಒತ್ತರದಿಂದ ಈ ಸುಧಾರಣೆ ಪ್ರಚಾರದಲ್ಲಿ
ಬರಬೇಕೆಂದು ಪ್ರಜೆಗಳು ಇಚ್ಛಿಸುವರು ಅಷ್ಟು ಒತ್ತರದಿಂದ ಅದನ್ನು
ಪ್ರಚಾರದಲ್ಲಿ ತರಲು ಸರಕಾರವಾದರೂ ಸಮ್ಮತಿಸುವದೆಂದು ಗೊತ್ತಾ
ದರೆ, ನನಗೆ ಸಂತೋಷವಾಗುತ್ತಿತ್ತು. ಆದರೆ ಇಷ್ಟರಿಂದ ಸಂತುಷ್ಟನಾಗಿ
ಸುಮ್ಮನಿರದೆ, ಹಳ್ಳಿಹಳ್ಳಿಯಲ್ಲಿಯೂ, ಮನೆ ಮನೆಗೂ, ಪ್ರತಿಯೊಬ್ಬ
ವ್ಯಕ್ತಿಗೂ ಈ ಸಂದೇಶವನ್ನು ಮುಟ್ಟಿಸುವುದು ನನ್ನ ಕರ್ತವ್ಯವೆಂದು
ಅದರಲ್ಲಿ ತೊಡಗುತ್ತಿದ್ದೆನು. ಸುವ್ಯವಸ್ಥಿತವೂ ನಿರಂತರವೂ ಆದ ಚಳವಳಿ
ಪ್ರಗತಿಯ ಆತ್ಮವು. ಆದುದರಿಂದ ನಿಮ್ಮ ಸ್ಥಳದಲ್ಲಿ ನಾನಿದ್ದರೆ ಈ ಸುಧಾ
ರಣೆ ನೆಲೆಗೊಳ್ಳುವವರೆಗೆ ನಾನೇನೂ ಸರಕಾರಕ್ಕೆ ಶಾಂತಿಯಿಂದ ಇರ
ಗೊಡುತ್ತಿರಲಿಲ್ಲ. ಸರಕಾರಕ್ಕೆ ಶಾಂತಿಯಿಂದ ಇರಗೊಡಬಾರದೆಂದರೆ

* ಈ ಭಾಷಣವು ೫ ವರ್ಷಗಳ ಹಿಂದಿನದು ಈಗ ಅನೇಕ ಬದಲಾವಣೆಗಳಾಗಿವೆ
ಮಹಾರಾಜರು ಗಾದಿಗೆ ಬಂದು ಎಲ್ಲ ಆಡಳಿತವನ್ನು ತಾನೇ ನೋಡುತ್ತಿದ್ದಾರೆ ಸಂ.)

ಅವಕ್ಕೆ ತೊಂದರೆಗಳನ್ನು ಒದಗಿಸಬೇಕೆಂದರ್ಥವಲ್ಲ. ಜಾಣವಾದ ಸರಕಾರವು ತನಗೆ ಬೇಕಾದ ಸುಧಾರಣೆಯನ್ನು ಸಾಧಿಸಲೋಸುಗ ಈ ಬಗೆಯ ಚಳವಳಿಯಿಂದ ದೊರೆವ ಉತ್ತೇಜನವನ್ನೂ ಸಾಹಾಯ್ಯವನ್ನೂ ಅಪೇಕ್ಷಿಸುವುದು. ಎಲ್ಲ ಬಗೆಯ ಅಸ್ಪೃಶ್ಯತೆಯನ್ನು ತೆಗೆದು ಹಾಕಲು ಇಲ್ಲಿಯ ಸವರ್ಣ ಹಿಂದುಗಳು ಆತುರರಾಗಿರುವರೆಂದು ನಾನು ಹಿಂದೆ ಬಂದಾಗ ಕೇಳಿದ್ದೆನು. ಆದರೆ ಈಗ ಅವರು ಅದರ ವಿಷಯದಲ್ಲಿ ಉದಾಸೀನರಾಗಿರುವರೆಂದು ತೋರುತ್ತದೆ. ಅವರು ತಮ್ಮ ಇಚ್ಛೆಯನ್ನು ಕೃತಿಯಲ್ಲಿ ತಂದಿಲ್ಲ. ಈ ಸಂಸ್ಥಾನದಲ್ಲಿಯ ಪ್ರತಿಯೊಬ್ಬ ಹಿಂದು ಮನುಷ್ಯನು ಕರ್ತವ್ಯವನ್ನರಿತು ತನ್ನ ಉಳಿದ ನಿದ್ರಿತ ಬಾಂಧವರನ್ನು ಎಚ್ಚರಿಸಿ ಅವರಿಗೆ ಕರ್ತವ್ಯಜ್ಞಾನವನ್ನು ಮಾಡಿಕೊಡುವುದು ಅವನ ಕರ್ತವ್ಯವಾಗಿರುವುದು. ಸವರ್ಣ ಹಿಂದುಗಳು ಏಕಕಂಠದಿಂದ ಅಸ್ಪೃಶ್ಯತೆ ಹೋಗಬೇಕೆಂಬ ತಮ್ಮ ಇಚ್ಛೆಯನ್ನು ವ್ಯಕ್ತಗೊಳಿಸಿದರೆ ಅದು ಹೋಗದಿರದೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ. ಆದುದರಿಂದ ಸರಕಾರವೇ ಈ ವಿಷಯದಲ್ಲಿ ಉದಾಸೀನವಾಗಿರುವುದೆಂದು ಹೇಳುವುದು ತಪ್ಪು. ನಿಜವಾಗಿಯೂ ಉದಾಸೀನತೆ ನಮ್ಮಲ್ಲಿಯೇ ಇರುವುದು.

## ಸತ್ಯಾಗ್ರಹದ ರಹಸ್ಯವು.

ಆದರೆ ಯಾವ ಸಮಾಜದಲ್ಲಿಯೇ ಆಗಲಿ ಯಾವ ದೇಶದಲ್ಲಿಯೇ ಆಗಲಿ ಸುಧಾರಕರ ಸಂಖ್ಯೆ ಅತ್ಯಲ್ಪವಾಗಿರುವುದು; ಎಲ್ಲ ಸುಧಾರಣಾ ಕಾರ್ಯದ ಭಾರವು ಈ ಅಲ್ಪ ಸಂಖ್ಯಾಕರಾದ ಸುಧಾರಕರ ತಲೆಯ ಮೇಲೆಯೇ ಬೀಳುವುದು. ಬಹುಕಾಲದಿಂದಲೂ ಇಲ್ಲಿ ತಳ ಊರಿದ್ದ ಈ ಅಸ್ಪೃಶ್ಯತೆಯ ರಾಕ್ಷಸನನ್ನು ಹೊರದೂಡಲು ಸುಧಾರಕರು ಯಾವ ಉಪಾಯಗಳನ್ನು ಕೈಕೊಳ್ಳಬೇಕು ಎಂಬದು ಒಂದು ಮಹತ್ವದ ಪ್ರಶ್ನವು. ಜಗತ್ತಿನೊಳಗಿನ ಎಲ್ಲ ಸುಧಾರಕರು ನಾನೀಗ ಹೇಳಲಿರುವ ಎರಡರಲ್ಲೊಂದು ಉಪಾಯವನ್ನು ಕೈಕೊಂಡಿರುವರು. ಸುಧಾರಕರಲ್ಲಿ ಬಹಳ ಮಂದಿ ಅನಿಯಂತ್ರಿತವಾದ ಚಳವಳಿಯನ್ನು ಎಬ್ಬಿಸಿ ಹಿಂಸಾಮಾರ್ಗವನ್ನವಲಂಬಿಸಿ ಜನರ ಲಕ್ಷ್ಯವನ್ನು ಅನ್ಯಾಯದ ಕಡೆಗೆ ಎಳೆದಿರುವರು. ಅವರು ಹೂಡುವ ಚಳವಳಿಯಿಂದ ಸರಕಾರಕ್ಕೆ ತೊಂದರೆ; ಮತ್ತು ನಾಗ

ರಿಕರ ಶಾಂತಿಮಯ ಜೀವಕ್ಕೆ ಭಂಗವು. ಎರಡನೆಯ ಬಗೆಯ ಸುಧಾರಕರು—ಎಂದರೆ ಅಹಿಂಸಾಮಾರ್ಗದ ಸುಧಾರಕರು, ಸೌಮ್ಯವಾದ ಹಳವಳಿಯಿಂದ ತಮ್ಮ ಕಾರ್ಯವನ್ನು ಸಾಧಿಸಲೆಳಸುವರು. ವಿಚಾರದಲ್ಲಿಯೇ ಆಗಲಿ, ಕೃತಿಯಲ್ಲಿಯೇ ಆಗಲಿ ಅತ್ಯಾಚಾರವನ್ನವಲಂಬಿಸಿ ಜನರ ಲಕ್ಷ್ಯವನ್ನೆಳೆದುಕೊಳ್ಳುವುದು ಅವರಿಗೆ ಹೇಯವಾಗಿರುವುದು. ಆದರೆ ಆತ್ಮಯಜ್ಞದಿಂದ ತಮ್ಮ ಕಾರ್ಯವನ್ನು ಸಾಧಿಸುವುದು ಅವರಿಗೆ ಇಷ್ಟವಾಗಿರುವುದು. ಅವರು ಇದ್ದುದನ್ನು ಇದ್ದಂತೆ ತೋರಿಸುವರಲ್ಲದೆ ಬಣ್ಣವನ್ನು ಕೊಟ್ಟು ಬೆಳೆಯಿಸರು. ಸತ್ಯದಿಂದ ಸ್ವಲ್ಪವಾದರೂ ಚಲಿಸರು. ಕೆಡಕನ್ನಡಗಿಸಲು ಅವರು ಆತುರರಾಗಿದ್ದರೂ ಕೆಡಕು ಮಾಡುವವರಿಗೆ ಅಹಿತವನ್ನು ಬಗೆಯರು. ಇವರ ಮಾರ್ಗಕ್ಕೆ ನಾನು ಚಿಕ್ಕದಾದ ಹೆಸರನ್ನು ಕೊಟ್ಟಿರುವೆನು. **'ಸತ್ಯಾಗ್ರಹ'** ವೆಂಬುದು ಅದರ ಹೆಸರು. ದಕ್ಷಿಣ ಆಫ್ರಿಕೆಯಲ್ಲಿ ಹೇಗೆಯೋ ಹಾಗೆಯೇ ನಿಮ್ಮದಿಲನಲ್ಲಿ ಅದನ್ನು ಇಟ್ಟಿರುವೆನು. ಸತ್ಯಾಗ್ರಹವೂ ಸವಿನಯ ಶಾಸನಭಂಗವೂ ಒಂದೇ ಎಂದು ಯಾವಾಗಲೂ ತಿಳಿಯಕೂಡದು. ಸವಿನಯ ಭಂಗವು ಸತ್ಯಾಗ್ರಹದ ಒಂದು ಶಾಖೆಯಾಗಿರುವುದೇನೋ ನಿಜವು. ಅದು ಸತ್ಯಾಗ್ರಹದ ಆರಂಭದಲ್ಲಿ ಬರುವುದಿಲ್ಲ. ಆದರೆ ಅದು ಕೊನೆಗೆ ಬರುವುದು. ಸವಿನಯ ಭಂಗವನ್ನು ಕೈಕೊಳ್ಳುವ ಮೊದಲು ಒಂದು ವಿಶಿಷ್ಟ ಬಗೆಯ ಸಿದ್ಧತೆಯನ್ನು ಮಾಡಿಕೊಂಡಿರಬೇಕಾಗುವುದು; ಆತ್ಮಸಂಯಮ ಶಕ್ತಿಯನ್ನು ತಂದುಕೊಂಡಿರಬೇಕಾಗುವುದು. ಅವರು ತಮ್ಮ ವಿರೋಧಿಗಳ ಉದ್ದೇಶಗಳನ್ನು ಸರಿಯಾಗಿ ತಿಳಿದುಕೊಳ್ಳಲು ಯತ್ನಿಸುವರಲ್ಲದೆ ಎಂದಿಗೂ ಅವಕ್ಕೆ ವಿಪರೀತಾರ್ಥವನ್ನು ಕಲ್ಪಿಸುವುದಿಲ್ಲ. ಏಕೆಂದರೆ ಒತ್ತಾಯದಿಂದ ವಶಪಡಿಸಿಕೊಳ್ಳಲು ಅವರು ಇಚ್ಛಿಸದೆ ಹೃದಯ ಪರಿವರ್ತನೆಯನ್ನುಂಟುಮಾಡಿ ವಶಪಡಿಸಿಕೊಳ್ಳುವರು. ವಿರುಧನಗರದಲ್ಲಿ ನನ್ನನ್ನು ಕಂಡ ಮಿತ್ರರೊಬ್ಬರು ನನ್ನ ತತ್ವಗಳಿಗೂ, ನನ್ನ ನುಡಿಗಳಿಗೂ ವಿಪರೀತಾರ್ಥವನ್ನು ಕಲ್ಪಿಸಿದುದನ್ನು ಕಂಡು ನನಗೆ ಆಶ್ಚರ್ಯವೂ ವ್ಯಥೆಯೂ ಆಯಿತು. ಅವರ ಮತ್ತು ನನ್ನ ನಡುವೆ ನಡೆದ ಸಮಾಚಾರವನ್ನು 'ತ್ರಿವೇಂಡ್ರಂ ಎಕ್ಸ್ಪ್ರೆಸ್ಸಿ'ನಲ್ಲಿ ಓದಿದೆನು. ಮೊದಲಿನಿಂದ ಕೊನೆಯ ವರೆಗೂ ಅದು ನಮ್ಮ

ಬ್ಬರ ನಡುವೆ ನಡೆದ ಭಾಷಣೆಯು ವಿಕೃತಸ್ವರೂಪವೇ ಆಗಿದ್ದಿತು. (ಸಭೆಯಲ್ಲಿ 'ಲಜ್ಜಾಸ್ಪದ' ಎಂಬ ಧ್ವನಿ) ಆದರೆ 'ಲಜ್ಜಾಸ್ಪದ' ವೆಂದು ಕೂಗಲು ಕಾರಣವೇನೂ ಇಲ್ಲ. ಲಜ್ಜಾಸ್ಪದವೆಂದು ಕೂಗಿದ ಗೃಹಸ್ಥನಿಗೆ ಔದಾರ್ಯದ ಅರ್ಥವೂ ಮಹತ್ವವೂ ಗೊತ್ತಾಗಿಲ್ಲವೆನ್ನಬೇಕು. ಏಕೆಂದರೆ ನನ್ನನ್ನು ಕಂಡ ಮಿತ್ರನು ಬುದ್ಧಿಪೂರ್ವಕವಾಗಿ ಈ ವಿಪರೀತಾರ್ಥವನ್ನು ಕಲ್ಪಿಸಿದ್ದಾನೆಂದು ನಾನು ಬಗೆಯಲಾರೆ. ತನಗೆ ಹಾಗೆ ಅಭಿಪ್ರಾಯವಾಗಲು ಕಾರಣಗಳೇನೆಂಬುದನ್ನು ಅವರು ಈವೊತ್ತು ಬೆಳಿಗ್ಗೆ ನನಗೆ ಹೇಳಿದರು. ಅವರ ಮಾತನ್ನು ನಂಬಲು ನಾನು ಸಿದ್ಧನಿರುವೆನು. ಆದರೆ ಇದನ್ನು ನಿಮ್ಮ ಕಿವಿಯ ಮೇಲೆ ಹಾಕಿದುದರ ಮುಖ್ಯ ಉದ್ದೇಶವೇನಂದರೆ ನನ್ನ ವಿಚಾರದಂತೆ ಸತ್ಯಾಗ್ರಹವೆಂದರೇನೆಂಬುದನ್ನು ನಾನು ಉದಾಹರಣೆಯಿಂದ ತೋರಿಸಬೇಕಾಗಿತ್ತು. ಮತ್ತು ಈ ಅಸ್ತ್ರದ ಉಪಯೋಗವನ್ನು ತಿಳಿಯದೆ ಅದನ್ನು ಉಪಯೋಗಿಸಲು ಹಾತೊರೆವ ಜನರಿಗೆ ಅದರೊಳಗಿನ ಗಂಡಾಂತರಗಳನ್ನು ತೋರಿಸಬೇಕಾಗಿತ್ತು. ಸುಧಾರಣೆಯ ಕಾರ್ಯವನ್ನು ಕೈಕೊಳ್ಳಲೆಳಸುವ ಜನರಿಗೆ ಎಚ್ಚರವನ್ನು ಕೊಡುವ ಉದ್ದೇಶದಿಂದ ಈ ಉದಾಹರಣೆಯನ್ನು ನಾನು ಹೇಳಿರುತ್ತೇನೆ. ತಾವು ಕೈಕೊಳ್ಳಲಿರುವ ಕೆಲಸವು ನ್ಯಾಯ್ಯವಾದುದೆಂದು ಪೂರ್ಣ ವಿಶ್ವಾಸವಿದ್ದ ಹೊರತು ಮತ್ತು ಆತ್ಮನಿಗ್ರಹಶಕ್ತಿ ಹೆಚ್ಚು ಪ್ರಮಾಣದಲ್ಲಿದ್ದ ಹೊರತು ಈ ಅಸ್ತ್ರವನ್ನು ಉಪಯೋಗಿಸಲು ಯಾರೂ ಸಾಹಸ ಮಾಡಬಾರದು. ಸತ್ಯಾಗ್ರಹವು ಅನುಪಮವಾದ ಅಸ್ತ್ರವು. ಅದರ ಶಕ್ತಿಗೆ ನಾನು ಮೋಹಿಸಿರುವೆನು. ಯಾರಾದರೂ ಅದನ್ನು ದುರುಪಯೋಗಿಸುವ ಸಂಭವವಿದ್ದಲ್ಲಿ ಶಕ್ಯವಿದ್ದಮಟ್ಟಿಗೆ ನಾನು ಅದನ್ನು ತಡೆಯದೆ ಇರಲಾರೆನು. ಸತ್ಯಾಗ್ರಹದ ಅರ್ಥವು ತನಗೆ ಗೊತ್ತಾಗುವವರೆಗೆ ಮತ್ತು ಅದರ ಮರ್ಮವನ್ನು ತನ್ನದಾಗಿ ಮಾಡಿಕೊಳ್ಳಲು ಸಮರ್ಥನಾಗುವವರೆಗೆ ಅದರ ಗೊಡವೆಗೆ ಹೋಗದಿರಲು ನಾನು ನನ್ನ ಗೆಳೆಯನಿಗೆ ಹೇಳಿದೆನು.

ಆದರೆ ಈ ಮಾತಿನಿಂದ ಸುಧಾರಕರು ನಿರುತ್ಸಾಹಿಗಳಾಗಬಾರದೆಂದು ನನ್ನ ಇಚ್ಛೆ. ಸತ್ಯಾಗ್ರಹದ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡು ಅದರಿಂದ ತಮ್ಮ ಕಾರ್ಯವನ್ನು ಅಲ್ಪಾವಧಿಯಲ್ಲಿ ಸಾಧಿಸಲು

ಸಮರ್ಥರಾಗಬೇಕೆಂದು ನಾನು ಇಷ್ಟು ಆಳವಾಗಿಯೂ ವಿಸ್ತಾರ ಪೂರ್ವಕವಾಗಿಯೂ ಈ ವಿಷಯವನ್ನು ಚರ್ಚಿಸುತ್ತಿರುವೆನು. ಸಮಾಜ ಸೇವೆಯ ಅಲ್ಪಸ್ವಲ್ಪ ಅನುಭವವುಳ್ಳವರಿಗೆ ನಾನು ನಮ್ರತೆಯಿಂದ ಸೂಚಿಸುವುದಿಷ್ಟೇ. ಈ ಕಾರ್ಯವನ್ನು ಅವರು ತಮ್ಮದಾಗಿ ಮಾಡಿ ಕೊಂಡು ಅದನ್ನು ಮುಂದುವರಿಸಬೇಕು. ಮತ್ತು ಅದರಲ್ಲಿ ಆಸಕ್ತಿ ಇದ್ದರೂ ಹೇಗೆ ಮುಂದುವರಿಸಬೇಕೆಂಬುದನ್ನು ಅರಿಯದ ತರುಣರನ್ನು ತಮ್ಮೊಡನೆ ಕರೆದುಕೊಂಡು ಅವರ ಉತ್ಸಾಹವನ್ನೂ ಇಚ್ಛಾಶಕ್ತಿ ಯನ್ನೂ ಕಾರ್ಯಕ್ಷಮವಾಗಿ ಮಾಡಬೇಕು. ಅಧಿಕಾರಿಗಳ ಸಂಬಂಧ ವನ್ನಿಟ್ಟುಕೊಂಡು, ಅವರನ್ನು ಪೀಡಿಸಿ, ಪೀಡಿಸಿ, ಈ ಸುಧಾರಣೆಯನ್ನು ಮಾಡಿಸಿಕೊಳ್ಳಬೇಕು. ಏಕೆಂದರೆ ಮಹಾರಾಣಿಯವರಷ್ಟೇ ಅಲ್ಲದೆ ದಿವಾಣಸಾಹೇಬರೂ ಈ ಸುಧಾರಣೆ ಸಾಧ್ಯವಾಗಬೇಕೆಂದು ಇಚ್ಛಿಸು ತ್ತಿರುವರು. ಆದರೆ ದಿವಾಣಸಾಹೇಬರು ಪರಮತದವರು. ಆದುದರಿಂದ ಹಿಂದುಗಳಾದ ನಾನೂ ನೀವೂ ಅವರಿಂದ ಬಹಳ ಸಹಾಯವನ್ನು ನಿರೀ ಕ್ಷಿಸಲಾಗದು. ಸರಕಾರದ ವಿಷಯದಲ್ಲಿ ಹೇಳುವುದಾದರೆ ಅದರ ಒಲವು ಸುಧಾರಣಾ ಪಕ್ಷದ ಕಡೆಗೆ ಇರುವುದೆಂದು ನನಗೆ ಅನಿಸುತ್ತಿದೆ. ಆದರೆ ಕೆಲಸವು ನಿಮ್ಮಿಂದ ಪ್ರಾರಂಭವಾಗಬೇಕಲ್ಲದೆ ಸರಕಾರದವರಿಂದಲ್ಲ.



# ವರ್ಣಾಶ್ರಮಧರ್ಮವೂ ಅಸ್ಪೃಶ್ಯತೆಯೂ

(ತ್ರಿವೇಂಡ್ರಂ ಭಾಷಣದಿಂದ ಆರಿಸಿಕೊಂಡುದು)

ಈವೊತ್ತು ಮುಂಜಾನೆ ವರ್ಣಾಶ್ರಮಧರ್ಮವು ಅಸ್ಪೃಶ್ಯತೆಯನ್ನು ಯಾವ ದೃಷ್ಟಿಯಿಂದ ಕಾಣುತ್ತದೆ ಎಂಬ ಪ್ರಶ್ನವನ್ನು ಕೆಲವರು ನನಗೆ ಕೇಳಿದರು. ವರ್ಣಾಶ್ರಮಧರ್ಮಕ್ಕೆ ನಾನು ಹೇಗೆ ಅರ್ಥಮಾಡುತ್ತೇನೆಂಬುದರ ವಿಷಯಕ್ಕೆ ನಾನೆರಡು ಮಾತುಗಳನ್ನು ಹೇಳಬೇಕೆಂಬುದೇ ಅವರ ಉದ್ದೇಶವು. ಹಿಂದುಧರ್ಮವನ್ನು ನಾನು ಅರಿತಿರುವ ಮಟ್ಟಿಗೆ 'ವರ್ಣ' ಶಬ್ದದ ಅರ್ಥವು ಅತ್ಯಂತ ಸರಳವಾಗಿರುವುದು. ನಮ್ಮ ಪೂರ್ವಜರು ಕೈಕೊಂಡ ಪರಂಪರಾಗತವಾದ ವ್ಯವಸಾಯಗಳನ್ನು ನಾವು ಕೈಕೊಳ್ಳಬೇಕೆಂಬುದು ವರ್ಣ ಶಬ್ದದ ಅರ್ಥವು. ಆ ದರೆಆ ವ್ಯವಸಾಯಗಳು ನೀತಿತತ್ವಗಳಿಗೆ ವಿರೋಧವಾಗಿದ್ದರೆ ಮಾತ್ರ ಅವನ್ನು ನಾವು ಬಿಡುವುದು ವಿಹಿತವು. ಪರಂಪರಾಗತವಾದ ವ್ಯವಸಾಯಗಳನ್ನು ಕೈಕೊಳ್ಳುವುದಾದರೂ ಉಪಜೀವನಕ್ಕೋಸುಗ. ಎಲ್ಲ ಧರ್ಮಗಳಲ್ಲಿ ಮನುಷ್ಯ ಶಬ್ದಕ್ಕೆ ಇರುವ ವ್ಯಾಖ್ಯೆ ನಮಗೆ ಸಮ್ಮತವಾಗಿದ್ದರೆ,ವರ್ಣವು ಎಂದರೆ,ಪರಂಪರಾಗತವಾದ ವ್ಯವಸಾಯವನ್ನು ಕೈಕೊಳ್ಳುವುದು, ಜೀವನದ ತತ್ವವಾಗಿರುವುದು. ದೇವರು ಸೃಜಿಸಿದ ಜೀವಕೋಟಿಯಲ್ಲಿ ಮಾನವನೊಬ್ಬನೇ ದೇವರನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಸೃಜಿಸಲ್ಪಟ್ಟವನು. ಆದುದರಿಂದ ಮಾನವನ ಜೀವನದ ಉದ್ದೇಶವು ದಿನದಿನವೂ ತನ್ನ ಭೌತಿಕ ಸಂಪತ್ತನ್ನು ಹೆಚ್ಚಿಸುವುದಿರದೆ ಪರಮಾತ್ಮನ ಹೆಚ್ಚು ಹೆಚ್ಚು ಸಾಮೀಪ್ಯವನ್ನೈದುವುದಿದೆ. ಮೇಲಿನ ಈ ಉದ್ದೇಶವನ್ನನುಲಕ್ಷಿಸಿ ನಮ್ಮ ಪೂರ್ವ ಋಷಿಗಳು ಜೀವನದ ಈ ತತ್ವವನ್ನು ಶೋಧಿಸಿರುತ್ತಾರೆ. ನಾವೆಲ್ಲರು ಈ ವರ್ಣ ನಿಯಮವನ್ನು ಪಾಲಿಸಬೇಕೆಂದಿದ್ದರೆ ನಮ್ಮ ಭೌತಿಕ ಆಕಾಂಕ್ಷೆಗಳನ್ನು ಒಂದು ಪರಿಮಿತಿಯಲ್ಲಿ ಇರಿಸಬೇಕು. ಇದರಿಂದ ಪರಮಾತ್ಮನ ಸಾಮೀಪ್ಯವನ್ನೈದುವ ಉಪಾಯಗಳನ್ನು ಶೋಧಿಸಲು ನಮ್ಮ ಶಕ್ತಿಯನ್ನು ಪಯೋಗಿಸಲು ನಮಗೆ ಅನುವಾಗುವುದು. ಆ ಮೇಲೆ ಜಗತ್ತಿ

ನಲ್ಲಿ ನಡೆದಿರುವ ಮತ್ತು ನಮ್ಮ ಲಕ್ಷ್ಯಗಳನ್ನು ಸೆಳೆದಿರುವ ಕಾರ್ಯ ಗಳಲ್ಲಿ ಹತ್ತರಲ್ಲಿ ಒಂಭತ್ತು ನಿರುಪಯೋಗವಾದವುಗಳೆಂದು ತೋರು ವವು. ಆಮೇಲೆ ನಾವು ಈಗ ಆಚರಿಸುತ್ತಿರುವ ವರ್ಣಾಶ್ರಮಧರ್ಮವು ನಾನು ಹೇಳುತ್ತಿರುವ ವರ್ಣಧರ್ಮದ ವಿಕೃತಸ್ವರೂಪವೆಂದು ನಿಮಗೆ ಗೊತ್ತಾಗುವುದು. ಅದು ನಿಜವಾಗಿಯೂ ಹಾಗಿದೆ. ಅಸತ್ಯವು ಸತ್ಯದ ವೇಷದಲ್ಲಿ ಮೆರೆಯುತ್ತಿದೆಎಂದು ನಾವೇನೂ ಸತ್ಯವನ್ನು ದ್ವೇಷಿಸುವುದಿಲ್ಲ. ಆದರೆ ಸತ್ಯಾಸತ್ಯವನ್ನು ವಿವೇಚಿಸಿ ಸತ್ಯಕ್ಕೆ ಅಂಟಿಕೊಳ್ಳುವೆವು. ಅದ ರಂತೆಯೇ ಈಗ ಪ್ರಚಲಿತವಾಗಿದ್ದ ವರ್ಣದ ವಿಕೃತಸ್ವರೂಪವನ್ನು ತ್ಯಜಿಸಿ ಸತ್ಯವರ್ಣವನ್ನಾಚರಿಸಿ ಹಿಂದುಸಮಾಜದ ಸ್ಥಿತಿಯನ್ನು ನಾವು ಉಜ್ವಲ ಗೊಳಿಸಬೇಕು.

'ಆಶ್ರಮ' ಎಂಬುದು ಈಗಲೇ ನಾನು ನಿಮ್ಮೆದಿರನಲ್ಲಿ ವಿವರಿಸಿದ ಸಿದ್ಧಾಂತದ ಉಪಸಿದ್ಧಾಂತವಿದೆ. ವರ್ಣವು ವಿಕೃತವಾಗಿದ್ದರೆ ಆಶ್ರಮವು ಸಂಪೂರ್ಣವಾಗಿ ಅದೃಶ್ಯವಾಗಿದೆ. ಆಶ್ರಮವೆಂದರೆ ಜೀವನದ ನಾಲ್ಕು ಸ್ಥಿತಿಗಳು. ಕನಿಷ್ಠಪಕ್ಷಕ್ಕೆ ಇಪ್ಪತ್ತೈದು ವರ್ಷಗಳಾದರೂ ಮನು ಷ್ಯನು ಬ್ರಹ್ಮಚರ್ಯಾಶ್ರಮವನ್ನು ಪಾಲಿಸಬೇಕು. ಹೀಗೆ ಪಾಲಿಸಿದ ಮನುಷ್ಯನಿಗೇ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ಅಧಿಕಾರವಿದೆ ಎಂದು ಬ್ರಹ್ಮಚರ್ಯಾಶ್ರಮವು ಹೇಳುತ್ತದೆ. ಮನುಷ್ಯನನ್ನು ಹೆಚ್ಚು ಹೆಚ್ಚು ಉನ್ನತ ಸ್ಥಿತಿಗೆ ಒಯ್ಯುವುದೂ ಮತ್ತು ಅವನನ್ನು ಸೃಷ್ಟಿಕರ್ತನ ಸಾಮೀಪಕ್ಕೆ ಐದಿಸುವುದೂ ಹಿಂದುಧರ್ಮದ ಮೂಲ ಉದ್ದೇಶವಾಗಿರು ವುದರಿಂದ ಋಷಿಗಳು ಗೃಹಸ್ಥಾಶ್ರಮಕ್ಕೂ ಒಂದು ಮೇರೆಯನ್ನು ಕಲ್ಪಿಸಿ, ವಾನಪ್ರಸ್ಥ ಸನ್ಯಾಸಾಶ್ರಮಗಳನ್ನು ನಾವು ಪಾಲಿಸಬೇಕೆಂಬ ವಿಧಿಯನ್ನು ನಮ್ಮ ಹಿತಕ್ಕೋಸುಗವೇ ಅವರು ನಿರ್ಮಿಸಿದರು. ಆದರೆ ಹಿಂದುಸ್ಥಾನದಲ್ಲೆಲ್ಲ ಹುಡುಕಿದರೂ ನಿಜವಾದ ಬ್ರಹ್ಮಚಾರಿಯಾಗಲಿ ಗೃಹಸ್ಥನಾಗಲಿ ದೊರೆಯುನು; ವಾನಪ್ರಸ್ಥ, ಸನ್ಯಾಸಿಗಳ ಮಾತಂತೂ ದೂರದಲ್ಲಿಯೇ. ಜೀವನದ ಈ ಯೋಜನೆಗೆ ಅಧಿಕ ಬುದ್ಧಿವಂತರಾದ ನಾವು ನಗಬಹುದು. ಆದರೆ ಇದು ಹಿಂದುಧರ್ಮದ ವೈಭವಶಾಲಿತ್ವದ ರಹಸ್ಯವಾಗಿದೆ. ಈಜಿಪ್ತ, ಅಸೀರಿಯಾ, ಬಾಬಿಲೋನಿಯಾಗಳ ಸಂಸ್ಕೃತಿ

ಗಳು ನಷ್ಟವಾದರೂ ಹಿಂದುಸಂಸ್ಕೃತಿ ಸಜೀವವಾಗಿ ಉಳಿದಿದೆ. ಕ್ರೈಸ್ತ ಸಂಸ್ಕೃತಿ ಪ್ರಾರಂಭವಾಗಿ ಇನ್ನೂ ಎರಡು ಸಾವಿರ ವರ್ಷಗಳು ಆಗಿಲ್ಲ. ಇಸ್ಲಾಮವಂತೂ ಇತ್ತೀಚಿನದು. ಇವೆರಡು ಮಹತ್ವದವುಗಳಿದ್ದರೂ ಅವುಗಳ ಸ್ವರೂಪವು ಇನ್ನೂ ಅನಿಶ್ಚಿತವಾಗಿರುವುದು. ಈಗಿನ ಕ್ರೈಸ್ತ ಯುರೋಪವು ನಿಜವಾಗಿಯೂ ಕ್ರೈಸ್ತವಿಲ್ಲ. ಅದು ಇನ್ನೂ ಕತ್ತಲಲ್ಲಿ ಕೈಯಾಡಿಸುತ್ತಲಿರುವುದು. ಅದೇ ಸ್ಥಿತಿ ಇಸ್ಲಾಮಕ್ಕಿರುವುದು. ಆದುದರಿಂದ ಈಗ ಈ ಮೂರು ಧರ್ಮಗಳಲ್ಲಿ ಅತ್ಯಂತ ವಿರೂಪವೂ, ಹೀನವೂ ಆದ ಸ್ಪರ್ಧೆ ನಡೆದಿರುವುದು. ದಿನಗಳು ಕಳೆದಂತೆ ವರ್ಣವು ಮನುಷ್ಯನ ಜೀವನದಲ್ಲಿ ಅತ್ಯಂತ ಮಹತ್ವವಾಗಿರುವುದೆಂದು ನನ್ನ ನಂಬುಗೆ ದೃಢವಾಗುತ್ತಿರುವುದು ಮತ್ತು ಹಿಂದುಧರ್ಮದಲ್ಲಿ ಅದು ಹೇಗೆ ಅವಶ್ಯವಾಗಿರುವುದು. ಹಾಗೆಯೇ ಕ್ರೈಸ್ತಧರ್ಮದಲ್ಲಿಯೂ ಇಸ್ಲಾಮಧರ್ಮದಲ್ಲಿಯೂ ಆವಶ್ಯಕವಾಗಿರುವುದು. ಆದುದರಿಂದ ದಕ್ಷಿಣ ಹಿಂದುಸ್ಥಾನದ ಕೆಲವೆಡೆಗಳಲ್ಲಿ ಹಲವು ಹಿಂದು ಜನರು ವರ್ಣಾಶ್ರಮಧರ್ಮವು ಹಿಂದು ಧರ್ಮಕ್ಕೆ ಹಾನಿಕರವಾಗಿರುವುದೆಂದು ಹೇಳುತ್ತಿರುವುದನ್ನು ನಾನು ಸರ್ವಥಾ ಸಮ್ಮತಿಸಲಾರೆನು. ಆದರೆ ಈಗ ನಾವು ಎಲ್ಲೆಲ್ಲಿಯೂ ಕಾಣುತ್ತಲಿರುವ ವರ್ಣಾಶ್ರಮಧರ್ಮದ ವಿಕೃತಸ್ವರೂಪವನ್ನು ಕ್ಷಣಹೊತ್ತಾದರೂ ಒಪ್ಪಿಕೊಳ್ಳಬೇಕೆಂದು ನನ್ನ ಮತವಲ್ಲ. ಈಗಿನ ಜಾತಿಪದ್ಧತಿ ವರ್ಣಾಶ್ರಮಧರ್ಮದಿಂದ ತೀರ ಭಿನ್ನವಾಗಿರುವುದು. ನೀವು ಹೇಳುವಂತೆ ಜಾತಿಪದ್ಧತಿ ಹಿಂದುಜನಾಂಗದ ಉನ್ನತಿಯ ಮಾರ್ಗದಲ್ಲಿ ನಿಶ್ಚಯವಾಗಿ ದೊಡ್ಡದೊಂದು ವಿಘ್ನವಾಗಿರುವುದು. ಅಸ್ಪೃಶ್ಯತೆಯಂತೂ ನಾನೀಗಾಗಲೆ ಅನೇಕಸಲ ಹೇಳಿದಂತೆ ವರ್ಣಾಶ್ರಮಧರ್ಮದಲ್ಲಿ ಸೇರಿದ ಕೊಳೆಯಾಗಿರುವುದು. ನಮ್ಮ ಹೊಲಗಳಲ್ಲಿ ಬೆಳೆದ ಕಳೆಯನ್ನೂ ಕಸವನ್ನೂ ಕಿತ್ತೊಗೆದಂತೆ ಅಸ್ಪೃಶ್ಯತೆಯನ್ನು ಕಿತ್ತೊಗೆವುದು ಅವಶ್ಯವು. ಈ ವರ್ಣಯೋಜನೆಯಲ್ಲಿ ಉಚ್ಚ ನೀಚ ಭಾವಕ್ಕೆ ಸರ್ವಥಾ ಆಸ್ಪದವಿಲ್ಲ. ನಾನು ಮಾಡಿದ ಹಿಂದುಧರ್ಮದ ಅರ್ಥವು ಸರಿಯಾಗಿದ್ದುದಾದರೆ ಜೀವವೆಂಬುದೆಲ್ಲವು ಸಮಾನವೂ ಒಂದೂ ಆಗಿರುವುದೆಂದೇ ಹಿಂದುಧರ್ಮವು ಹೇಳುವುದು. ಆದುದರಿಂದ ಯಾವನಾದರೂ ಬ್ರಾಹ್ಮಣನೊಬ್ಬನು ಉಳಿದ

ವರ್ಣದವರಿಗಿಂತ ತಾನು ಹೆಚ್ಚಿನವನೆಂದು ಹೇಳಿದರೆ ಅದು ಅವನ ದುರಭಿ
ಮಾನದ ದ್ಯೋತಕವಾಗಿರುವುದು. ಪುರಾತನದ ಬ್ರಾಹ್ಮಣರು ಹೀಗೆ
ಯಾವಾಗಲೂ ಹೇಳುತ್ತಿರಲಿಲ್ಲ. ತಾವು ಹೆಚ್ಚಿನವರೆಂದು ಹೇಳುತ್ತಿದ್ದರೆಂದು
ಅವರು ಪೂಜ್ಯರಾಗಿದ್ದಿಲ್ಲ; ಆದರೆ ಪ್ರತಿಫಲಾಪೇಕ್ಷೆ ಇಲ್ಲದೆ ಎಲ್ಲ ಪರಿಸ್ಥಿತಿ
ಯಲ್ಲಿಯೂ ಲೋಕಸೇವೆಯನ್ನು ಮಾಡುವುದರಲ್ಲಿ ಯಾವಾಗಲೂ
ತಮ್ಮ ಜೀವನವನ್ನು ಸವೆಯಿಸುತ್ತಿದ್ದರು. ಆ ಬ್ರಾಹ್ಮಣರು ಮಾಡು
ತ್ತಿದ್ದ ಕಾರ್ಯವನ್ನು ತಾವು ಈಗ ಮಾಡುತ್ತಿರುವೆವೆಂದು ಹೇಳುತ್ತ
ಧರ್ಮವನ್ನು ವಿಕೃತಗೊಳಿಸುತ್ತಿರುವ ಈಗಿನ ಬ್ರಾಹ್ಮಣರು ಹಿಂದು
ಧರ್ಮದ ರಕ್ಷಕರೂ ಅಲ್ಲ; ಬ್ರಾಹ್ಮಣ್ಯದ ರಕ್ಷಕರೂ ಅಲ್ಲ. ತಿಳಿದೋ,
ತಿಳಿಯದೆಯೋ ತಾವು ಕುಳಿತ ಗಿಡದ ಬೊಡ್ಡೆಗೇನೇ ಅವರು ಕೊಡಲಿ
ಯನ್ನಿಕ್ಕುತ್ತಿದ್ದಾರೆ. ಅಸ್ಪೃಶ್ಯತೆಯನ್ನು ನಾವು ಪಾಲಿಸಲೇಬೇಕೆಂದು
ಶಾಸ್ತ್ರಗಳು ಹೇಳುತ್ತಿವೆ ಎಂದೂ, ಅಸ್ಪೃಶ್ಯರು ಸಮೀಪದಲ್ಲಿ ಬಂದರೆ
ನಮಗೆ ಮೈಲಿಗೆಯಾಗುತ್ತದೆಂದೂ ಅವರು ಹೇಳಿದರೆ ಅವರು ತಮ್ಮ
ಧರ್ಮಕ್ಕೆ ವಿರೋಧವಾಗಿ ಆಚರಿಸುವರೆಂದೂ ಮತ್ತು ಹಿಂದುಧರ್ಮಕ್ಕೆ
ವಿಪರೀತಾರ್ಥವನ್ನು ಕಲ್ಪಿಸುವರೆಂದೂ ನಾನು ಹೇಳದಿರಲಾರೆನು. ಈ
ನನ್ನ ಭಾಷಣವನ್ನು ಕೇಳಿದ ಹಿಂದುಗಳಾದ ನೀವು ಅಸ್ಪೃಶ್ಯತೆಯ
ಕಲಂಕವನ್ನು ತೆಗೆದುಹಾಕಲು ನಿಮ್ಮ ಶಕ್ತಿಯನ್ನೆಲ್ಲ ಉಪಯೋಗಿಸು
ವುದು ಆವಶ್ಯಕವೆಂಬುದನ್ನು ನೀವು ತಿಳಿಯದೆ ಇರಲಾರಿರಿ. ಪುರಾತನ
ಹಿಂದುಸಂಸ್ಥಾನದ ಪ್ರಜೆಗಳಾದ ನೀವು ಈ ಸುಧಾರಣೆಯನ್ನು ಮಾಡು
ವುದರಲ್ಲಿ ಅಗ್ರೇಸರರಾಗಲು ನಿಮಗೆ ಅಭಿಮಾನವಿರತಕ್ಕದು. ಇಲ್ಲಿಯ
ಪರಿಸ್ಥಿತಿಯನ್ನು ಸರಿಯಾಗಿ ತಿಳಿದುಕೊಳ್ಳಲು ಯತ್ನಿಸಿದ ನನಗೆ ಈ
ಕಾರ್ಯವನ್ನಾರಂಭಿಸಲು ಈ ಸಮಯವು ಅತ್ಯಂತ ಶುಭವಾಗಿರುವು
ದೆಂದು ತೋರುತ್ತದೆ. ಆದರೆ ನೀವು ಬಹು ಉತ್ಸಾಹದಿಂದಲೂ ಆಸ್ಥೆ
ಯಿಂದಲೂ ಮುಂದುವರಿಯಲಿಕ್ಕೆ ಬೇಕು.



೨

## ಪುನಃ ವರ್ಣಾಶ್ರಮವು.

ಒಬ್ಬ ಮಿತ್ರರು ಬರೆವರು:—

"ಮೊನ್ನೆ ನೀವು ಮದ್ರಾಸದಲ್ಲಿ ಮಾಡಿದ ಭಾಷಣದಲ್ಲಿ ವರ್ಣಗಳಲ್ಲಿ ನಿಮಗೆ ನಂಬುಗೆ ಇರುವುದೆಂದು ಹೇಳಿರುವಿರಿ. ಆದರೆ ವರ್ಣಗಳು ಆನುವಂಶಿಕವಾಗಿರಬೇಕೆಂದು ನಿಮ್ಮ ಅಭಿಪ್ರಾಯವೋ? ಆನುವಂಶಿಕತ್ವವನ್ನು ನೀವು ಮನ್ನಿಸುತ್ತೀರೆಂದು ಕೆಲವರು, ಮನ್ನಿಸುವುದಿಲ್ಲೆಂದು ಕೆಲವರು ಬಗೆವರು. ನಿಮ್ಮ ಲೇಖಗಳನ್ನು ಓದಿದ ನಾನು, ನೀವು ಆನುವಂಶಿಕತ್ವವನ್ನು ಮನ್ನಿಸುತ್ತೀರೆಂದು ತಿಳಿಯುತ್ತೇನೆ. ಹೀಗಿದ್ದರೆ ಅಸ್ಪೃಶ್ಯರು ಶೂದ್ರರಲ್ಲಿ ಗಣಿಸಲ್ಪಡಬೇಕೆಂದೂ ಮತ್ತು ಬ್ರಾಹ್ಮಣೇತರರು ಉಪಭೋಗಿಸುತ್ತಿರುವ ಎಲ್ಲ ಹಕ್ಕುಗಳೂ ಅವರಿಗೆ ಇರಬೇಕೆಂದೂ ನೀವು ಹೇಳುವುದರ ಅರ್ಥವೇನು? ಬ್ರಾಹ್ಮಣರೂ ಬ್ರಾಹ್ಮಣೇತರರೂ ಬೇರೆ ಬೇರೆ ಪ್ರಾಣಿವರ್ಗಕ್ಕೆ ಸೇರಿರುವರೋ ಏನೋ ಎಂಬಂತೆ ಅವರಿವರಲ್ಲಿ ಪುನಃಪುನಃ ಭೇದವನ್ನೆಣಿಸುವ ಕಾರಣವೇನು? ಅಸ್ಪೃಶ್ಯನು ಬ್ರಾಹ್ಮಣೇತರನಾಗಬಹುದಾದರೆ ಇದೇ ಜನ್ಮದಲ್ಲಿ ಅವನು ಬ್ರಾಹ್ಮಣನಾಗಲಾರನೋ? ಅಸ್ಪೃಶ್ಯನಿಗೆ ಶೂದ್ರನಾಗುವದು ಶಕ್ಯವಿದ್ದರೆ, ಇದೇಜನ್ಮದಲ್ಲಿ ಶೂದ್ರನಿಗೆ ವೈಶ್ಯನಾಗಲು, ವೈಶ್ಯನಿಗೆ ಕ್ಷತ್ರಿಯನಾಗಲು, ಕ್ಷತ್ರಿಯನಿಗೆ ಬ್ರಾಹ್ಮಣನಾಗಲು ಏಕೆ ಅಶಕ್ಯವಾಗಬೇಕು. ಅದು ಶಕ್ಯವಿದೆ ಎಂಬವರ ಮುಖದ ಮೇಲೆ ಕರ್ಮತತ್ವವನ್ನೇಕೆ ಎಸೆವಿರಿ? ಎಜೆವಾ ಜನರ ಗುರುಗಳಾದ ಶ್ರೀ ನಾರಾಯಣಸ್ವಾಮಿಯವರಿಗಿಂತ ಹೆಚ್ಚಿನ ಯೋಗ್ಯತೆಯ ಬ್ರಾಹ್ಮಣನು ಯಾವನಾದರೂ ಇರುವನೋ? ಬನಿಯನಾದ ಗಾಂಧಿಗಿಂತ ಹೆಚ್ಚಿನ ಬ್ರಾಹ್ಮಣನನ್ನು ನಾನು ಕಂಡಿಲ್ಲ. ಬ್ರಾಹ್ಮಣಜಾತಿಯ ಬ್ರಾಹ್ಮಣರಿಗಿಂತ ಹೆಚ್ಚಿನ ಯೋಗ್ಯತೆಯ ಬ್ರಾಹ್ಮಣತ್ವವನ್ನು ಪಡೆದ ನೂರಾರು ಬ್ರಾಹ್ಮಣೇತರರನ್ನು ನಾನು ಬಲ್ಲೆನು.

"ಆನುವಂಶಿಕತತ್ವವು ನಿಮಗೆ ಮಾನ್ಯವಿರದಿದ್ದರೆ ಒಂದೇಜನಾಂಗದವರಾದ, ಒಂದೇಧರ್ಮದವರಾದ, ಒಂದೇಬಗೆಯ ಸದಾವಳಿಗಳುಳ್ಳ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಮಿಶ್ರವಿವಾಹವನ್ನೂ ಮಿಶ್ರಭೋಜನ

ನನ್ನೂ ನೀವು ನಿರೋಧಿಸುತ್ತಿರಲಿಲ್ಲ. ಅದರಂತೆಯೇ ಶಾಕಾಹಾರಿಗಳಾದ ಬ್ರಾಹ್ಮಣ ಬ್ರಾಹ್ಮಣೇತರರಲ್ಲಿಯೂ ಸಹ ಪಂಕ್ತಿಭೋಜನಕ್ಕೆ ಇಷ್ಟು ತೀವ್ರವಾದ ವಿರೋಧವು ನಿಮ್ಮಿಂದ ಒದಗುತ್ತಿರಲಿಲ್ಲ.

"ಅನುವಂಶಿಕತ್ವವು ಜೀವನದ ಒಂದು ಮಹತ್ವದ ತತ್ವವಾಗಿರುವುದು ನಿಜವು. ಆದರೆ ಅದಕ್ಕಿಂತ ಹೆಚ್ಚಿನ ಮಹತ್ವದ ತತ್ವಗಳು ಬೇರೆ ಯುವು ಕೆಲವು ಇರುವವು. 'ವಿಕಾಸವಾದದ ಪ್ರಾಣಿಶಾಸ್ತ್ರ' ಶಾಖೆಯಲ್ಲಿ "ಪರಿವರ್ತನ ತತ್ವವು" (The law of variation) ಈ ನಿಯಮಗಳ ಲ್ಲೊಂದು. **ಅನುವಂಶಿಕತ್ವವು ವಿಶ್ವದ ಜಡಶಕ್ತಿ;** (Static principle) **ಪರಿವರ್ತನವು ಸಂಚಲನಶಕ್ತಿ** (Dynamic Principle). **ಪರಿವರ್ತನವು ಪ್ರಗತಿಯ ಗುಟ್ಟು.** ಯಾವ ಸಾಮಾಜಿಕ ಪದ್ಧತಿಯೂ ಅನುವಂಶಿಕತ್ವವನ್ನು ದುರ್ಲಕ್ಷಿಸಲಾರದು; ಅದರಂತೆಯೇ ಅದು ಪರಿವರ್ತನವನ್ನು ದುರ್ಲಕ್ಷಿಸಲಾರದು. ದುರ್ಲಕ್ಷಿಸಿದರೆ ಆಪತ್ತೊದಗದಿರದು. ಹಿಂದುಸ್ಥಾನದೊಳಗಿನ ಜಾತಿಪದ್ಧತಿಯ ಇತಿಹಾಸವು ಇದಕ್ಕೆ ಸಾಕ್ಷಿಯಾಗಿದೆ. ಸಮಾಜದ ಬೌದ್ಧಿಕ ಮತ್ತು ಧಾರ್ಮಿಕ ವಿಷಯಗಳ ಸಂರಕ್ಷಣೆಗೋಸುಗವೂ, ಸುವ್ಯವಸ್ಥೆಗೋಸುಗವೂ ವಂಶಪರಂಪರಾಗತ ರಾದ ಜನರೇ ನಿರಂತರವಾಗಿ ಇರಬೇಕೆಂದು ಹೇಳುವುದೆಂದರೆ ಅನುವಂಶಿಕ ತತ್ವದ ದುರುಪಯೋಗವೇ ಎಂಬುದನ್ನು ಜಾತಿಪದ್ಧತಿಯ ಇತಿಹಾಸವು ಸಿದ್ಧಮಾಡುತ್ತದೆ.

"ಅನೇಕ ವಿದ್ವಜ್ಜನರು ವರ್ಣಾಶ್ರಮ ಧರ್ಮದ ತತ್ವವನ್ನು ಸ್ವಲ್ಪ ಮಟ್ಟಿಗಾದರೂ ಸಡಿಲಿಸಬೇಕೆಂದು ಹೇಳುತ್ತಿರುವಲ್ಲಿ ನೀವೊಬ್ಬರು ಮಾತ್ರ ಅದಕ್ಕೆ ಹತ್ತಿಕೊಂಡೇ ಇರಬೇಕೆಂದು ಹೇಳುತ್ತಿರುವುದು ನಿಜ ವಾಗಿ ಸೋಜಿಗದ ಮಾತು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟಗೊಳಿಸಬೇಕಾಗಿ ಬೇಡುತ್ತೇನೆ."

ಇದಕ್ಕೆ ಉತ್ತರ ರೂಪವಾಗಿ ನಾನು ಹೇಳುವುದಿಂತು:—

ವರ್ಣಾಶ್ರಮಧರ್ಮಕ್ಕೂ ಅಸ್ಪೃಶ್ಯತೆಗೂ ಇರುವ ಭೇದವನ್ನು ನಾನು ಅನೇಕ ಸಲ ತೋರಿಸಿರುವೆನು. ವರ್ಣಾಶ್ರಮಧರ್ಮವು ಶಾಸ್ತ್ರ ಶುದ್ಧವೂ ವಿವೇಕಪೂರ್ಣವೂ ಆಗಿರುವುದೆಂದು ಅದನ್ನು ಸಮರ್ಥಿಸಿರುವೆನು

ಮತ್ತು ಅಸ್ಪೃಶ್ಯತೆ ಎಂಬುದು ಹಿಂದುಧರ್ಮದ ಕೊಳೆ ಎಂದು ಅದನ್ನು ನಿಷೇಧಿಸಿರುವೆನು; ನಾನು ನನ್ನ ಬುದ್ಧಿಮಾಂದ್ಯದಿಂದ ಭೇದವಿಲ್ಲದಲ್ಲಿ ಭೇದವನ್ನೂ, ಅಜ್ಞಾನ ಅಥವಾ ಮೂಢತೆ ಇದ್ದಲ್ಲಿ ಜ್ಞಾನ, ವಿಜ್ಞಾನವನ್ನೂ ನಾನು ಕಾಣುತ್ತಿರಬಹುದು. ಆದರೆ ವರ್ಣಾಶ್ರಮಧರ್ಮವು ಜನ್ಮಮೂಲವಾದ ಜಾತಿತತ್ವವನ್ನು ಅವಲಂಬಿಸಿರುವುದೆಂದೂ ಮತ್ತು ವಿವೇಕಪೂರ್ಣವಾದ ಶ್ರಮವಿಭಾಗದ ತತ್ವವನ್ನು ಅನುಸರಿಸಿರುವುದೆಂದೂ ನಾನು ತಿಳಿಯುತ್ತೇನೆ. ಜಾತಿಯ ವಿಷಯದಲ್ಲಿ ಈಗ ಜನರಿಗಿರುವ ವಿಚಾರಗಳು ವರ್ಣಾಶ್ರಮದ ತತ್ವಕ್ಕೆ ಅತ್ಯಂತ ವಿರುದ್ಧವಾದವು ಆಗಿರುವವು. ಉಚ್ಚ ನೀಚಗಳ ಭಾವನೆ ನನ್ನ ಧರ್ಮದಲ್ಲಿಲ್ಲ. ಅದು ಕೇವಲ ಕರ್ತವ್ಯದ ವಿಷಯವಾಗಿರುವುದು. ವರ್ಣಾಶ್ರಮವು ಜನ್ಮಮೂಲವಾದ ಜಾತಿತತ್ವವನ್ನವಲಂಬಿಸಿರುವುದೆಂದು ನಾನು ಹೇಳಿರುವುದು ನಿಜ. ಆದರೆ ಶೂದ್ರನಿಗೆ ವೈಶ್ಯನಾಗಲು ಬರಬಹುದೆಂದೂ ನಾನು ಹೇಳಿದ್ದೇನೆ. ಆದರೆ ಅವನು ವೈಶ್ಯನ ಕರ್ತವ್ಯವನ್ನು ನೆರವೇರಿಸಲು ತಾನು ವೈಶ್ಯನೆನ್ನಿಸಿಕೊಳ್ಳಲೇಬೇಕೆಂಬ ನಿಯಮವಿಲ್ಲ. ಸ್ವಾಮಿ ನಾರಾಯಣ ಗುರುಗಳು ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಪಡೆದವರೆಂದು ಪ್ರತೀತಿ ಇರುವುದು. ಆ ಪಾಂಡಿತ್ಯವನ್ನು ಸಂಪಾದಿಸಲು ಬ್ರಾಹ್ಮಣರೆಂದೆನ್ನಿಸಿಕೊಳ್ಳುವ ಅವಶ್ಯಕತೆ ಅವರಿಗೆ ತೋರಲಿಲ್ಲ. ಬ್ರಾಹ್ಮಣರ ಕರ್ಮವನ್ನು ಮಾಡುವವರು ಮುಂದಿನ ಜನ್ಮದಲ್ಲಿ ಸುಲಭವಾಗಿ ಬ್ರಾಹ್ಮಣರಾಗಿ ಹುಟ್ಟಬಲ್ಲರು. ಆದರೆ ಇದೇ ಜನ್ಮದಲ್ಲಿ ಒಂದು ವರ್ಣದಿಂದ ಮತ್ತೊಂದು ವರ್ಣಕ್ಕೆ ಹೋಗುವುದರಿಂದ ಮೋಸಕ್ಕೆ ಆಸ್ಪದವಾಗುವುದು. ಇದರಿಂದ ವರ್ಣವೇ ಸಮೂಲವಾಗಿ ನಾಶವಾಗುವುದು. ವರ್ಣನಾಶವು ಇಷ್ಟವಾದುದೆಂದು ನನಗೆ ತೋರುವುದಿಲ್ಲ. ಭೌತಿಕ ಮಹತ್ವಾಕಾಂಕ್ಷೆಗೆ ವರ್ಣತತ್ವದಿಂದ ವಿಘ್ನವಾಗಬಹುದು. ಯಾವ ಸಂಸ್ಥೆಗೆ ಧಾರ್ಮಿಕ ವಿಚಾರಗಳೇ ಮೂಲವಾಗಿರುವವೋ ಆ ಸಂಸ್ಥೆಯನ್ನು ಭೌತಿಕ ವಿಚಾರಗಳ ಮಾಪಿನಿಂದ ಅಳೆವುದು ಯೋಗ್ಯವಾಗದು.

'ಅಸ್ಪೃಶ್ಯನು ಶೂದ್ರನಾಗಬಹುದಾದರೆ ಅದೇ ಅಸ್ಪೃಶ್ಯನು ಮುಂದೆ ವೈಶ್ಯನಾಗಿ, ಬಳಿಕ ಕ್ಷತ್ರಿಯನಾಗಿ, ತರುವಾಯದಲ್ಲಿ ಬ್ರಾಹ್ಮ

ಣನೂ ಆಗಬಹುದಲ್ಲವೆ ?' ಎಂಬ ವಿಚಾರಸರಣಿ ತರ್ಕಶುದ್ಧವಾದುದಲ್ಲ. ಹಿಂದುಧರ್ಮದಲ್ಲಿ ಐದನೆಯ ವರ್ಣಕ್ಕೆ ಆಸ್ಪದವೇ ಇಲ್ಲವಾದುದರಿಂದ ಪಂಚಮರನ್ನು ಶೂದ್ರರಲ್ಲಿ ಎಣಿಸಬೇಕೆಂದು ನಾನು ಹೇಳಿರುವೆನು. ಪಂಚಮನು ಶೂದ್ರನು ಮಾಡುತ್ತಿರುವ ಕೆಲಸವನ್ನು ಮಾಡುತ್ತಿರುವುದರಿಂದ ಅವನು ಶೂದ್ರನಾಗಿ ಎಣಿಸಲ್ಪಡಬೇಕು. ಹಾಗೆ ಎಣಿಸಲ್ಪಟ್ಟರೆ ಅವನ ಪಂಚಮತ್ವ ಉಳಿವುದೆಲ್ಲಿ? ವರ್ಣಾಶ್ರಮಧರ್ಮಕ್ಕೂ ಅಸ್ಪೃಶ್ಯತೆಗೂ ಇಲ್ಲದ ಸಂಬಂಧವನ್ನು ಕಲ್ಪಿಸಿ ವರ್ಣಾಶ್ರಮ ಧರ್ಮವನ್ನೇ ಅಲ್ಲಗಳೆದರೆ ಅಸ್ಪೃಶ್ಯತಾನಿವಾರಣೆಯ ಚಳವಳಿಯು ಪ್ರಗತಿಗೆ ಒಂದು ವಿಘ್ನವನ್ನೊಡ್ಡಿದಂತಾಗುತ್ತದೆ.

ವರ್ಣಾಶ್ರಮಧರ್ಮದಿಂದ ಪರಿವರ್ತನ ತತ್ವಕ್ಕೆ ಯಾವಬಗೆಯ ಭಂಗವೂ ಬರುವುದಿಲ್ಲ. ಇಷ್ಟೇ ಅಲ್ಲ; ವರ್ಣಾಶ್ರಮಧರ್ಮದಲ್ಲಿ ಅದಕ್ಕೆ ಆಸ್ಪದವಿದೆ. ಆದರೆ ಪರಿವರ್ತನವೆಂಬುದು ಕಾಲಾವಧಿಯ ಮಾತು. ಸಂಪೂರ್ಣವಾಗಿ ಪರಿವರ್ತನೆಯಾಗಲು, ಎಂದರೆ ಒಂದು ಹೋಗಿ ಮತ್ತೊಂದಾಗಲು ಅನೇಕ ಜನ್ಮಗಳು ಕಳೆವುವು. ಬ್ರಾಹ್ಮಣ ಮತ್ತು ಹೊಲೆಯರಲ್ಲಿ ಮೂಲತಃ ಮಹತ್ವದ ಯಾವ ಭೇದವೂ ಇರುವುದಿಲ್ಲ. ಆದರೆ ಆ ಆ ವರ್ಣದವರ ಗುಣದೋಷಗಳನ್ನು ಚನ್ನಾಗಿ ಪರೀಕ್ಷಿಸಿದರೆ ಅದರಲ್ಲಿ ಭೇದವಿದ್ದುದು ಅಥವಾ ನಾಲ್ಕು ವರ್ಣದವರಲ್ಲಿ ಪರಸ್ಪರ ಭೇದವಿದ್ದುದು ಒಡೆದು ಕಾಣದಿರಲಾರದು. ಬ್ರಾಹ್ಮಣರಿಗಾಗಲಿ ಬೇರೆಯವರಿಗಾಗಲಿ ತಾವು ಹೆಚ್ಚಿನವರೆಂದು ಇರುವ ದುರಭಿಮಾನವನ್ನು ನಿರ್ಮೂಲಗೊಳಿಸಲು ನಾನೂ, ಪತ್ರಬರೆದ ನನ್ನ ಮಿತ್ರರೂ ಪ್ರಯತ್ನಿಸಬೇಕಾಗಿರುವುದು. ಈಗ ನಡೆದಿರುವ ವರ್ಣಾಶ್ರಮಧರ್ಮದ ದುರುಪಯೋಗವನ್ನು ನಾವು ನಿಲ್ಲಿಸಬೇಕಲ್ಲದೆ ವರ್ಣಾಶ್ರಮಧರ್ಮವನ್ನೇ ಹಾಳುಗೆಡೆಹಲು ಸರ್ವಥಾ ಯತ್ನಿಸತಕ್ಕದ್ದಲ್ಲ.



## ೩

## ವರ್ಣಾಶ್ರಮವೂ ಅಸ್ಪೃಶ್ಯತೆಯೂ

ಅದೇ ಮಿತ್ರರು ಬರೆವುದೇನೆಂದರೆ:— "ವರ್ಣಾಶ್ರಮ ಧರ್ಮದ
ವಿಷಯದ ನನ್ನ ಪತ್ರದ ಮೇಲಿನ ತಮ್ಮ ವಿಮರ್ಶೆಯನ್ನು ನಾನು ಓದಿ
ದೆನು. ವರ್ಣಾಶ್ರಮ ಮತ್ತು ಅಸ್ಪೃಶ್ಯತೆ ಇವುಗಳ ನಡುವೆ ತಾವು
ಮಾಡುವ ಭೇದವು ನನಗೆ ಯೋಗ್ಯವಾಗಿ ತೋರುವುದು. ಮತ್ತು
ಹಿಂದು ಧರ್ಮದಲ್ಲಿ ಅಸ್ಪೃತೆಗೆ ಎಲ್ಲಿಯೂ ಶಾಸ್ತ್ರಾಧಾರವಿಲ್ಲವೆಂದು
ನಾನು ಒಪ್ಪುವೆನು. ಆದರೆ 'ಜನ್ಮಮೂಲವಾದ ತತ್ವವನ್ನವಲಂಬಿಸಿದ
ಮತ್ತು ವಿವೇಕಪೂರ್ಣವಾದ ಶ್ರಮವಿಭಾಗವನ್ನನುಸರಿಸಿರುವ ವರ್ಣಾ
ಶ್ರಮ ಧರ್ಮವು' ನಮ್ಮ ಸಮಾಜವ್ಯವಸ್ಥೆಯ ಪ್ರತಿಷ್ಠಾನವಾಗಿದ್ದ
ಪಕ್ಷದಲ್ಲಿ ಅಸ್ಪೃಶ್ಯರದೊಂದು ವರ್ಗವು ಹಿಂದು ಸಮಾಜದಲ್ಲಿ ಇರಬೇ
ಕೆಂಬ ಮಾತು ಸ್ಪಷ್ಟವಾಗುವುದಿಲ್ಲವೋ? ಹೀಗಿರಲು ಭಂಗಿಕೆಲಸ ಮಾಡು
ವುದು, ಕುಣಿತೋಡುವುದು, ಹೆಣ ಹೊರುವುದು ಮುಂತಾದ ಅಸ್ವಚ್ಛ
ವಾದ ಕೆಲಸಗಳನ್ನು ಮಾಡುತ್ತಿರುವವರನ್ನು ಇತರರು ಮುಟ್ಟದಿರು
ವುದು ನ್ಯಾಯವಾಗಿರದಿದ್ದರೆ ಮತ್ತಾವುದು ನ್ಯಾಯವು! ಉಳಿದ ಎಲ್ಲ
ದೇಶಗಳಲ್ಲಿ ಭಂಗಿಗಳು, ಮಡಿವಾಳರು, ಕುಣಿ ತೋಡುವವರು, ಹೆಣ
ಹೊರುವವರು ಮುಂತಾದವರು ಅಥವಾ ಅವರ ವರ್ಗಗಳು ಅಸ್ಪೃಶ್ಯ
ರೆಂದು ಎಣಿಸಲ್ಪಡುವುದಿಲ್ಲ. ಏಕೆಂದರೆ ಈ ವ್ಯವಸಾಯಗಳು ಅಲ್ಲಿ ಆನು
ವಂಶಿಕವಾಗಿ ನಡೆದು ಬಂದಿರುವುದಿಲ್ಲ. ಮನುಷ್ಯನು ಯಾವದೇ ವರ್ಗದ
ವನಿರಲಿ ಅವನು ಸೈನಿಕನ, ಶಿಕ್ಷಕನ, ವ್ಯಾಪಾರಿಯ, ವಕೀಲನ, ರಾಜ
ಕಾರಣಿಯ ಅಥವಾ ಧರ್ಮಾಚಾರ್ಯನ ವೃತ್ತಿಯನ್ನು ಬೇಕಾದಾಗ
ಕೈಕೊಳ್ಳಲು ಸ್ವತಂತ್ರನಾಗಿರುವನು. ಕೇವಲ ನಮ್ಮ ದೇಶದಲ್ಲಿಯೇ
ಕಾಣಬರುವ ಈ ಅಸ್ಪೃಶ್ಯತೆಯು ಪಾಪಕ್ಕೆ ಆನುವಂಶಿಕತ್ವದ ಮೇಲೆಯೇ
ನಿಂತಿರುವ ನಮ್ಮ ವಿಲಕ್ಷಣವಾದ ಸಾಮಾಜಿಕ ಪದ್ಧತಿಯೇ ಮೂಲವಾ
ಗಿರುವುದು. ನಾವು ಆನುವಂಶಿಕತ್ವಕ್ಕೆ ಅಂಟಿಕೊಂಡಿರುವವರೆಗೆ ಅಸ್ಪೃ
ಶ್ಯತೆಯನ್ನು ದೂರಗೊಳಿಸಲು ಶಕ್ಯವಿಲ್ಲವೆಂದು ನನಗೆ ಎನಿಸುತ್ತದೆ.
ರಾಮಾನುಜರಂಥ ಪ್ರತಾಪಶಾಲಿಗಳಾದ ಸುಧಾರಕರ ಪ್ರಯತ್ನದಿಂದಾ

ಗಲಿ ಅಥವಾ ಯಾವದೊಂದು ಬಲಪತ್ತರವಾದ ರಾಜಕೀಯ ಉದ್ವೇಗ ದಿಂದಾಗಲಿ ಕಾಲಕಾಲಕ್ಕೆ ಅಸ್ಪೃಶ್ಯತೆಯ ಉಗ್ರತೆಯು ಸ್ವಲ್ಪು ಮಟ್ಟಿಗೆ ಕಡಿಮೆಯಾಗಬಹುದಾದರೂ ಅದು ಸಂಪೂರ್ಣವಾಗಿ ನಾಶವಾಗಬಹು ದೆಂದು ನನಗೆ ಎನಿಸುವುದಿಲ್ಲ. ಜಾತಿಭೇದಭಾವವನ್ನು ತೆಗೆದುಹಾಕದೆ ಅಸ್ಪೃಶ್ಯತೆಯನ್ನು ಕಳೆಯಲು ನಾವು ಮಾಡುವ ಪ್ರಯತ್ನಗಳೆಲ್ಲವು ನಿಷ್ಫ ಲವಾಗದಿರವು. ಯಾವದೊಂದು ಗಿಡವನ್ನು ನಾಶಗೊಳಿಸುವುದಾದರೆ ತುದಿಯಲ್ಲಿಯ ಎರಡು ಟೊಂಗೆಗಳನ್ನು ಕಡಿದೊಗೆದರೆ ನಮ್ಮ ಕೆಲಸ ವಾಗದು ''

ಮೇಲಿನ ಪತ್ರವು ಸಯುಕ್ತಿಕವಾಗಿರುವುದಾಗಿ ತೋರುತ್ತದೆ. ಸಕಾಲದಲ್ಲಿ ಎಚ್ಚರಿಯದಿದ್ದರೆ ನಮ್ಮ ಮಿತ್ರರಿಗೆ ತೋರುವ ಗಂಡಾಂತರ ಗಳು ಸಂಭವಿಸದೆ ಇರಲಾರವು. ಅವರ ಯುಕ್ತಿವಾದದಲ್ಲಿ ಒಂದು ಬಗೆಯ ಪ್ರಮಾದವು ಸ್ಪಷ್ಟವಾಗಿದೆ. ಮೊಚ್ಚೆಗಾರ ಅಥವಾ ಭಂಗಿಯವನ ವಿಷ ಯದಲ್ಲಿ ಅಸ್ಪೃಶ್ಯತೆ ಅವನ ಜನ್ಮದಿಂದ ಬಂದಿರುವುದೋ ಅಥವಾ ಅವನ ವ್ಯವಸಾಯದಿಂದಲೋ ? ಜನ್ಮದಿಂದ ಬಂದಿರುವುದಾದರೆ ಅದು ಬಹು ಅಸಹ್ಯವಾದುದು; ಅದನ್ನು ನಿರ್ಮೂಲಗೊಳಿಸುವುದು ಅತ್ಯವಶ್ಯವು. ಅವರ ವ್ಯವಸಾಯವು ಅದಕ್ಕೆ ಕಾರಣವಾಗಿದ್ದರೆ ಅದೇನೂ ತಪ್ಪಾಗ ಲಾರದು. ಅದು ಆರೋಗ್ಯದ ನಿಯಮವನ್ನನುಸರಿಸಿಯೇ ಇರುವುದು. ಈ ನಿಯಮವು ಸಾರ್ವತ್ರಿಕವಾದುದು. ಕಲ್ಲಿದ್ದಲಿ ಖಣಿಯೊಳಗೆ ಕೆಲಸ ದಲ್ಲಿ ತೊಡಗಿರುವವರೆಗೆ ಆ ಕೆಲಸಗಾರನು ಅಸ್ಪೃಶ್ಯನಾಗಿರುವನು. ಅವನೊಡನೆ ಹಸ್ತಾಂದೋಲನ ಮಾಡಲು ನಾವು ಕೈ ಚಾಚಿದರೆ, ತನ್ನಕೈಗಳು ಹೊಲಸಾಗಿರುವವೆಂದು ಅವನೇ ತನ್ನ ಕೈಯನ್ನು ನಮ್ಮ ಕೈಯಲ್ಲಿ ಕೊಡಲೊಪ್ಪನು. ಆದರೆ ಅವನ ಕೆಲಸವು ಮುಗಿದ ಬಳಿಕ ಸ್ನಾನಮಾಡಿ ಮಡಿ ಬಟ್ಟೆಗಳನ್ನುಟ್ಟು ಉಳಿದ ಜನರೊಡನೆ-ಶ್ರೇಷ್ಠ ಜನರೊಡನೆಯೂ- ಅವನು ಕೂಡಬಲ್ಲನು. ಜಾತಿತತ್ವವನ್ನವಲಂಬಿಸಿದ ಅಸ್ಪೃಶ್ಯತೆಯನ್ನು, ಎಂದರೆ ಉಚ್ಚತ್ವವು ನೀಚತ್ವವು ಬರುವುದೆಂಬ ಭಾವನೆ ಯನ್ನು, ನಮ್ಮ ಮನಸ್ಸಿನಿಂದ ಅಳಿಸಿದೊಡನೆ ನಮ್ಮ ವರ್ಣಾಶ್ರಮ ಧರ್ಮವು ಶುದ್ಧವಾಗುವುದು. ಭಂಗಿಯ ಮಕ್ಕಳು ಭಂಗಿಯವರಾಗಿಯೆ.

ಉಳಿದರೂ, ಅವರು ಬಹಿಷ್ಕೃತರಾಗಿರಲೂ ಮತ್ತು ತಾವು ಬಹಿಷ್ಕೃತರೆಂಬ ಭಾವನೆಯನ್ನು ತಳೆಯಲೂ ಆಸ್ಪದವು ಉಳಿಯದು. ಮತ್ತು ಬ್ರಾಹ್ಮಣರಂತೆ ಅವರಾದರೂ ಸ್ಪೃಶ್ಯರಾಗಿ ಉಳಿವರು. ತಪ್ಪು ಆನುವಂಶಿಕತ್ವಕ್ಕೆ ಮಾನ್ಯತೆಯನ್ನು ಈಯುವುದರಲ್ಲಿಯಾಗಲಿ ಮತ್ತು ಗುಣಗಳು ಆನುವಂಶಿಕವಾಗಿ ಒಬ್ಬರಿಂದ ಒಬ್ಬರಿಗೆ ಬರುತ್ತಿವೆ ಎಂದು ನಂಬುವುದರಲ್ಲಿಯಾಗಲಿ ಇರುವುದಿಲ್ಲ. ಆದರೆ ವಿಷಮತೆಯ ಕಲ್ಪನೆಯನ್ನು ನಾವು ಸರಿಯಾಗಿ ಮಾಡಿಕೊಳ್ಳದೆ ಇರುವುದರಲ್ಲಿ ಆ ತಪ್ಪು ಇರುತ್ತದೆ.

ನನ್ನ ಅಭಿಪ್ರಾಯದಂತೆ ವರ್ಣಾಶ್ರಮದ ಕಲ್ಪನೆ ಸಂಕುಚಿತಭಾವದಿಂದ ಉಂಟಾದುದಲ್ಲ. ಕೂಲಿಕಾರನಾದ ಶೂದ್ರನನ್ನು, ವಿಚಾರಶೀಲ ಬ್ರಾಹ್ಮಣನನ್ನು ಅದು ಸಮನಾಗಿ ಎಣಿಸಿರುವುದು. ಪುಣ್ಯವನ್ನು ಬೆಳೆಯಿಸಲಿಕ್ಕೂ ಪಾಪವನ್ನು ಕಳೆದುಕೊಳ್ಳಲಿಕ್ಕೂ ಅದರಲ್ಲಿ ಉಪಾಯಗಳನ್ನು ಕಾಣಬಹುದು. ಅದು ಮಾನವಿ ಆಕಾಂಕ್ಷೆಯನ್ನು ಕ್ಷಣಿಕವಾದ ಐಹಿಕ ಕ್ಷೇತ್ರದಿಂದ ತೊಲಗಿಸಿ ಶಾಶ್ವತವಾದ ಪಾರಮಾರ್ಥಿಕ ಕ್ಷೇತ್ರದ ಕಡೆಗೆ ಒಯ್ಯುತ್ತದೆ. **ಬ್ರಾಹ್ಮಣನ ಗುರಿಯಾಗಲಿ ಶೂದ್ರನ ಗುರಿಯಾಗಲಿ ಒಂದೇ– ಅದು ಮೋಕ್ಷವು; ಆತ್ಮಾನುಭವವು— ಕೀರ್ತಿಪ್ರಾಪ್ತಿಯಲ್ಲ; ಧನಸಂಚಯವಲ್ಲ; ಮತ್ತು ಅಧಿಕಾರ ಲಾಭವಲ್ಲ.** ಬರಬರುತ್ತ ಈ ವರ್ಣಾಶ್ರಮಧರ್ಮದ ಅತ್ಯುಚ್ಚ ಕಲ್ಪನೆ ವಿಕೃತ ಸ್ವರೂಪವನ್ನು ತಳೆಯಿತು; ವರ್ಣಾಶ್ರಮವೆಂದರೆ ಕೇವಲ ಜೊಳ್ಳು ಆಚಾರಧರ್ಮವೆಂಬ ಕಲ್ಪನೆಗೆ ಪ್ರಾಧಾನ್ಯವು ಬಂದಿತು; ಮತ್ತು ಕೆಲವರು ತಾವು ಉಚ್ಚಕೋಟಿಯವರೆಂದು ಬಗೆದು ಎರಡನೆಯವರನ್ನು ನೀಚರೆಂದು ಭಾವಿಸಲಾರಂಭಿಸಿದರು. ವರ್ಣಾಶ್ರಮಧರ್ಮವು ಅವನತಿ ಹೊಂದಿತೆಂದು ಮೇಲೆ ನಾನು ಹೇಳಿದೆನು. ಆದರೆ ಇದು ಅದರಲ್ಲಿ ದೌರ್ಬಲ್ಯತೆ ಇರುವುದೆಂದಲ್ಲ. ಆದರೆ ಮಾನವ ಸ್ವಭಾವದಲ್ಲಿರುವ ದುರ್ಬಲತೆ ಅದರ ಅವನತಿಗೆ ಕಾರಣವು. ಕೆಲವು ಪ್ರಸಂಗಗಳಲ್ಲಿ ಮಾನವ ಸ್ವಭಾವವು ಅತ್ಯುಚ್ಚ ಸ್ಥಾನವನ್ನು ಪಡೆಯಲು ಬಯಸುವುದಾದರೆ ಮತ್ತೆ ಕೆಲವು ಪ್ರಸಂಗಗಳಲ್ಲಿ ಅತ್ಯಂತ ನೀಚ ಸ್ಥಿತಿಗೂ ಹೋಗಲು ಅದರ ಪ್ರವೃತ್ತಿ ಇರುತ್ತದೆ. ನಾವು ಮಾಡಬೇಕಾದುದು ಅಸ್ಪೃಶ್ಯತೆಯನ್ನು

ನಿವಾರಿಸುವುದು; ಮತ್ತು ವರ್ಣಾಶ್ರಮಕ್ಕೆ ಅದರ ಮೊದಲಿನ ಸ್ಥಿತಿಯು ನ್ನುಂಟುಮಾಡಿಕೊಡುವುದು. ವರ್ಣಾಶ್ರಮವು ತನ್ನ ಮೊದಲಿನ ಸ್ಥಳಕ್ಕೆ ಬಂದ ಬಳಿಕ ಉಳಿವುದೋ ಅಳಿವುದೋ ನೋಡಬೇಕು. ಅದು ಉಳಿವುದು ಬಿಡುವುದು ನಮಗೆ ತಿಳಿಯುದಂತೆ ಈಗ ಅಸ್ತಿತ್ವದಲ್ಲಿ ಬರುತ್ತಿರುವ ನೂತನ ಬ್ರಾಹ್ಮಣ ವರ್ಗದ ಕಾರ್ಯವನ್ನು ಅವಲಂಬಿಸಿರುವುದು. ತಮ್ಮ ದೇಹ, ಆತ್ಮ, ಮನಸು ಇವೆಲ್ಲವನ್ನು ಹಿಂದುಧರ್ಮದ ಮತ್ತು ಸ್ವದೇಶದ ಸೇವೆ ಗೋಸುಗ ಸಮರ್ಪಿಸಲು ಮುಂದೆ ಬರುತ್ತಿರುವ ಜನರೇ ನಾನು ಹೇಳುವ ನೂತನ ಬ್ರಾಹ್ಮಣ ವರ್ಗದವರು. ಐಹಿಕ ಆಕಾಂಕ್ಷೆಗಳಿಂದ ಅವರು ಮುಕ್ತರಾಗಿದ್ದರೆ ಹಿಂದುಧರ್ಮದ ಉನ್ನತಿಯಾಗುವುದು. ಇಲ್ಲದಿದ್ದರೆ ಉಳಿದವುಗಳಂತೆ ಹಿಂದುಧರ್ಮವೂ ಐಹಿಕ ಮಹತ್ವಾಕಾಂಕ್ಷೆಗಳ ಕೈಯಲ್ಲಿ ಸಿಕ್ಕಿ ಅಳಿವುದು ನಿಶ್ಚಯವು. ಆದರೆ ಆಗಾಗ ತನ್ನಲ್ಲಿ ಕೂಡಿಬೀಳುತ್ತಿ ರುವ ಮಾಲಿನ್ಯವನ್ನು ತೆಗೆದುಹಾಕಿ ಪರಿಶುದ್ಧವಾಗಲು ಅದರಲ್ಲಿ ಶಕ್ತಿ ಇದೆ ಎಂದು ನನ್ನ ದೃಢವಾದ ನಂಬುಗೆ. ಅದರ ಆ ಶಕ್ತಿ ಈಗ ತೀರಿ ಹೋಗಿರುವುದೆಂದು ನನಗೆ ಎನಿಸುವುದಿಲ್ಲ.



## ಸವರ್ಣ ಹಿಂದುಗಳಿಗೆ ಪ್ರಾರ್ಥನೆ.

( ಕ್ವಿಯಿಲೋನ್ ಭಾಷಣದಿಂದ ಆರಿಸಿಕೊಂಡದ್ದು ).

**ಆರ್ಸೆನಿಕ್ ದ್ರವ್ಯದ (ಸೋಮಲದ) ಒಂದು ಹನಿಯಿಂದ ಹಾಲೆಲ್ಲವು ವಿಷಮಯವಾಗುವಂತೆ ಅಸ್ಪೃಶ್ಯತೆಯಿಂದ ಹಿಂದು ಧರ್ಮವು ವಿಷಮಯವಾಗುವುದು.**

ಹಾಲಿನ ಗುಣಧರ್ಮಗಳನ್ನೂ ಉಪಯೋಗವನ್ನೂ, ಸೋಮಲದ (ಸುಂಬಳಖಾರ) ಭಯಂಕರ ಸ್ವರೂಪವನ್ನು ಅರಿತ ಮನುಷ್ಯನು, ಯಾವ ನಾದರೊಬ್ಬನು ಹಾಲಿನ ಕೊಡದ ಹತ್ತಿರ ಕುಳಿತು ಸುಂಬಳಖಾರವನ್ನು ಒಂದೊಂದೇ ಕಣದಿಂದ ತೆಗೆದಿಡುತ್ತಿರುವುದನ್ನು ನೋಡಿದರೆ, ಅವನ ವಿಷಯದಲ್ಲಿ ಕೋಪಗೊಂಡು ಆ ಹಾಲಿನ ಕೊಡವನ್ನೇ ಹೊರಗೆ ಉರು ಳಿಸಿ ಬಾರದಿರನು. ನನಗೆ ಅಸ್ಪೃಶ್ಯತೆ ಎಂಬ ವಿಷವು ಹಿಂದುಧರ್ಮ ವನ್ನೇ ಹಾಳುಗೆಡುವುತ್ತಲಿರುವುದೆಂದು ಎನಿಸುತ್ತದೆ. ಇಂಥ ಪ್ರಸಂಗ ಗಳಲ್ಲಿ ಕೈಮುಚ್ಚಿ ನೋಡುತ್ತ ಕುಳಿತುಕೊಳ್ಳುವುದು ಧರ್ಮವಾಗ ಲಾರದು. ಈ ಸಮಯದಲ್ಲಿ ತಡೆದುಕೊಂಡು ಕೂಡ್ರುವುದು ಅಶಕ್ಯವು, ಕಂಡೂ ಕಂಡು ಅನಿಷ್ಟವನ್ನು ಹೊರಗೆ ಹಾಕದೆ ಕೈಮುಚ್ಚಿಕೊಂಡು ಕೂಡ್ರುವುದೆಂದರೆ ಅದನ್ನು ನಮ್ಮ ಮೈಮೇಲೆ ತಂದುಕೊಂಡಂತೆಯೇ ಸರಿ. ಇದರಿಂದ ನಮಗೆ ಒದಗುತ್ತಿರುವ ಅಪಾಯವನ್ನು ದುರ್ಲಕ್ಷಿಸಿ ದಂತಾಗುತ್ತದೆ.

ಅಸ್ಪೃಶ್ಯರ ವಿಷಯದಲ್ಲಿ ನಮ್ಮ ಕರ್ತವ್ಯವನ್ನು ನಾವು ದುರ್ಲಕ್ಷಿ ಸುತ್ತ ಬಂದಿರುವೆವು. ಮತ್ತು ಆ ಪ್ರಮಾಣದಿಂದ ನಾನೂ, ನೀವೂ ಹಿಂದುತ್ವದ ಅಯೋಗ್ಯಪ್ರತಿನಿಧಿಗಳಾಗಿರುವೆವು. ಅಸ್ಪೃಶ್ಯತೆಯನ್ನು ಸಮರ್ಥಿಸಲು ಯಾರಾದರೂ ಏನನ್ನಾದರೂ ಹೇಳಿದರೆ ಯಾವ ಅನು ಮಾನವೂ ಇಲ್ಲದೆ ಅವರ ಮಾತನ್ನು ನೀವು ದುರ್ಲಕ್ಷಿಸಿ ನಿಮ್ಮ ಕಾರ್ಯ ದಲ್ಲಿ ಮುಂದುವರಿಯಬೇಕು. ಈ ಯುಗದಲ್ಲಿ ಒಬ್ಬ ವ್ಯಕ್ತಿಯಾಗಲಿ, ಸಮುದಾಯವಾಗಲಿ ಮಾಡುವ ಯಾವ ಕಾರ್ಯವಾದರೂ ಬಹು ಕಾಲದವರೆಗೆ ಗುಪ್ತವಾಗಿ ಉಳಿಯದು. ನಮ್ಮ ಹೃದಯದಲ್ಲಿ ಅಸ್ಪೃಶ್ಯ

ತೆಗೆ ಸ್ಥಾನವಿರುವವರೆಗೆ ಜಗತ್ತಿನ ದೃಷ್ಟಿಯಲ್ಲಿ ನಮ್ಮ ಬೆಲೆ ಕಡಿಮೆ ಯಾಗಿಯೇ ಉಳಿವುದೆಂಬುದನ್ನು ಮರೆಯಲಾಗದು. ಪ್ರಪಂಚದ ಎಲ್ಲ ಧರ್ಮಗಳಲ್ಲಿ ಈಗ ಹೊಸ ಹೊಸ ಪರಿವರ್ತನೆಗಳು ಎಡಬಿಡದೆ ನಡೆದಿರು ವವು. ಹಾಲು ಕುಡಿವ ಬೆಕ್ಕಿನಂತೆ ಕಣ್ಣು ಮುಚ್ಚಿಕೊಂಡು ಕುಳಿತರೆ ಗಂಡಾಂತರವು ಮೈಮೇಲೆ ಬರುವುದು. ಈಗ ಎದ್ದಿರುವ ಜಗಚ್ಚಕ್ರ ಭ್ರಮಣದಲ್ಲಿ ಅಸ್ಪೃಶ್ಯತೆಯಾದರೂ ನಾಶಹೊಂದಬೇಕು. ಇಲ್ಲವೆ ಹಿಂದು ಧರ್ಮವಾದರೂ ಇಲ್ಲದಂತೆ ಆಗಬೇಕು. ಆದರೆ ಹಿಂದುಧರ್ಮವು ಈಗ ಸಾಯುತ್ತಿರುವುದಿಲ್ಲ. ಅದು ಎಂದೂ ಸಾಯಲಾರದು ಎಂದು ನಾನು ನಂಬಿದ್ದೇನೆ. ಏಕೆಂದರೆ ಸಾಯುವ ಮನುಷ್ಯನು ಜೀವ ಬಿಡಲಾರದೆ ಒದ್ದಾಡುವಂತೆ ಅಸ್ಪೃಶ್ಯತೆ ಒದ್ದಾಡುತ್ತಿರುವುದನ್ನು ನಾನು ಪ್ರತ್ಯಕ್ಷ ವಾಗಿ ನೋಡುತ್ತಿದ್ದೇನೆ.

---

# ಬಂಗಾಲದ ಅಸ್ಪೃಶ್ಯರು.

ಒಬ್ಬ ಬಂಗಾಲಿ ಮಿತ್ರರು ಹೀಗೆ ಬರೆವರು:—

(೧) "ಬಂಗಾಲದಲ್ಲಿ ಅಸ್ಪೃಶ್ಯರಿಗೆ ಬಾವಿಗಳಿಂದ ನೀರನ್ನು ಎಳೆಯ ಗೊಡುವುದಿಲ್ಲ. ಮತ್ತು ಕುಡಿವ ನೀರಿಟ್ಟ ಸ್ಥಳದಲ್ಲಿ ಅವರಿಗೆ ಹೋಗ ಗೊಡುವುದಿಲ್ಲ. ಈ ಅನ್ಯಾಯ ನಿವಾರಣೆಗೆ ಉಪಾಯವೇನು? ಸ್ವತಂತ್ರ ವಾದ ಬಾವಿಗಳನ್ನೂ ಶಾಲೆಗಳನ್ನೂ ಮಾಡಿಕೊಟ್ಟರೆ ಅಸ್ಪೃಶ್ಯತೆಯನ್ನು ನಾವು ಸಮರ್ಥಿಸಿದಂತೆ ಆಗುವುದು."

(೨) "ಬಂಗಾಲದ ಅಸ್ಪೃಶ್ಯರ ಮನಸ್ಥಿತಿಯನ್ನು ವಿಚಾರಿಸಿದರೆ ಹೀಗಿದೆ:— ಮೇಲಿನ ವರ್ಗದವರು ತಮ್ಮ ನೀರನ್ನು ಸ್ವೀಕರಿಸಬೇಕು. ಆದರೆ ತಮಗಿಂತ ಕೆಳಗಿನ ವರ್ಗದವರ ನೀರನ್ನು ಅವರು ಸ್ವೀಕರಿಸುವು ದಿಲ್ಲ. ಅವರಿಗೆ ಅವರ ಈ ತಪ್ಪನ್ನು ತೋರಿಸಿಕೊಡುವ ಬಗೆಯಾವುದು?"

(೩) "ಬಂಗಾಲದಲ್ಲಿಯ ಹಿಂದು ಮಹಾಸಭೆಯವರು ಮತ್ತು ಸಾಮಾನ್ಯತಃ ಎಲ್ಲ ಹಿಂದು ಜನಗಳು ಅಸ್ಪೃಶ್ಯರು ತಂದುಕೊಟ್ಟ ನೀರನ್ನು

ಉಚ್ಚ ವರ್ಣದವರು ಸ್ವೀಕರಿಸಬೇಕೆಂಬ ವಿಚಾರವು ನಿಮಗೆ ಸಮ್ಮತವಿಲ್ಲ ವೆಂದು ಹೇಳುತ್ತಿರುವರು. ಅದು ನಿಜವೋ?''

ನನ್ನ ಉತ್ತರಗಳು ಇಂತಿವೆ:—

(೧) ಈ ಅನ್ಯಾಯವನ್ನು ತೆಗೆದುಹಾಕುವ ಒಂದು ಉಪಾಯ ವೆಂದರೆ, ಅಸ್ಪೃಶ್ಯರು ತಂದುಕೊಟ್ಟ ನೀರನ್ನು ನಾವು ತೆಗೆದುಕೊಳ್ಳ ಬೇಕೆಂಬುದು. ಅಸ್ಪೃಶ್ಯರಿಗೋಸುಗ ಸ್ವತಂತ್ರ ಬಾವಿಗಳನ್ನು ತೆಗೆಯು ಸುವುದು ಈ ಅನ್ಯಾಯವನ್ನು ಸ್ಥಿರಪಡಿಸಿದಂತಾಗುವುದೆಂದು ನಾನು ತಿಳಿವುದಿಲ್ಲ. ಅಸ್ಪೃಶ್ಯತೆಯ ಪರಿಣಾಮಗಳನ್ನು ತೊಲಗಿಸುವುದಕ್ಕೆ ಕಾಲಾವಧಿ ಬೇಕು. ಅವರಿಗೆ ಸ್ವತಂತ್ರ ಶಾಲೆ ಬಾವಿಗಳನ್ನು ಮಾಡಿ ಕೊಟ್ಟರೆ ಉಚ್ಚ ವರ್ಣದವರು ಅವರಿಗೆ ಮುಂದೆ ಸಾರ್ವಜನಿಕ ಶಾಲೆ ಬಾವಿಗಳ ಉಪಯೋಗವನ್ನು ಮಾಡಿಕೊಳ್ಳಗೊಡಲಿಕ್ಕಿಲ್ಲವೆಂಬ ಅಂಜಿಕೆ ಯಿಂದ ಅವರಿಗೆ ಯಾವ ಬಗೆಯ ಅನುಕೂಲತೆಗಳನ್ನು ನಾವು ಕಲ್ಪಿಸದಿರು ವುದು ತಪ್ಪು. ಅಸ್ಪೃಶ್ಯರಿಗೋಸುಗ ಉತ್ತಮವಾದ ಬಾವಿಗಳನ್ನು ನಾವು ಮಾಡಿಕೊಟ್ಟರೆ ಉಳಿದ ಅನೇಕರು ಅವುಗಳನ್ನು ಉಪಯೋಗಿಸು ವರೆಂದು ನನ್ನ ನಂಬುಗೆ. ಸವರ್ಣ ಹಿಂದುಗಳಿಗೆ ಅಸ್ಪೃಶ್ಯರ ವಿಷಯ ದಲ್ಲಿರುವ ದುರಾಗ್ರಹವನ್ನು ಮತ್ತು ಅಸ್ಪೃಶ್ಯ ಅಸ್ಪೃಶ್ಯರಲ್ಲಿರುವ ದುರಾ ಗ್ರಹವನ್ನು ತೆಗೆದುಹಾಕುವ ಕೆಲಸವು ಏಕಕಾಲದಲ್ಲಿ ನಡೆಯಬೇಕು.

(೨) ಉಚ್ಚವರ್ಣದವರೆಂಬವರು ಅಸ್ಪೃಶ್ಯರನ್ನು ಮುಟ್ಟತೊಡ ಗಿದರೆ ಅಸ್ಪೃಶ್ಯರು ತಮಗಿಂತ ಕಡಿಮೆಯವರನ್ನು ಮುಟ್ಟದಿರುವುದಾ ದರೂ ತಾನಾಗಿಯೇ ನಿಂತುಬಿಡುತ್ತದೆ. ನಮ್ಮ ಕಾರ್ಯವು ಅತ್ಯಂತ ನಿಕೃಷ್ಟನಾದ ಅಸ್ಪೃಶ್ಯನ ಅಸ್ಪೃಶ್ಯತೆಯನ್ನು ದೂರಮಾಡುವುದರಿಂದ ಪ್ರಾರಂಭವಾಗಬೇಕು.

(೩) ಬಂಗಾಲ ಹಿಂದು ಮಹಾಸಭೆಯವರು ನನ್ನ ವಿಷಯದಲ್ಲಿ ಏನು ಹೇಳುವರೆಂಬುದನ್ನು ನಾನರಿಯೆ. ನನ್ನ ವಿಚಾರವು ಸ್ಪಷ್ಟವಿದೆ. ಅಸ್ಪಶ್ಯರು ಶೂದ್ರ ವರ್ಗದೊಳಗೆ ಎಣಿಸಲ್ಪಡಬೇಕು. ಮತ್ತು ಅವರನ್ನು ನಾವು ಶೂದ್ರರಂತೆ ನಡೆಯಿಸಿಕೊಳ್ಳಬೇಕು. ನಾವು ಶೂದ್ರರ ಕೈಯಿಂದ ನೀರನ್ನು ಸ್ವೀಕರಿಸುತ್ತೇವೆಂದಮೇಲೆ ಅಸ್ಪೃಶ್ಯರ ಕೈಯೊಳಗಿನ ನೀರನ್ನು ಸ್ವೀಕರಿಸಲು ನಮಗೆ ಆತಂಕವೆನಿಸಕೂಡದು.

# ಒಂದು ಕಠಿಣ ಪ್ರಶ್ನೆ

ಆಂಧ್ರ ದೇಶದ ಮಿತ್ರರೊಬ್ಬರು ತಮ್ಮ ಕೆಲವು ಸಂಶಯಗಳನ್ನು ತಿಳಿಸುತ್ತಾರೆ:—

"ಶೂದ್ರರ ನೀರನ್ನು ನಾವು ಸ್ವೀಕರಿಸುವುದರಿಂದ ಅಸ್ಪೃಶ್ಯರ ನೀರನ್ನು ತೆಗೆದುಕೊಳ್ಳಲು 'ನಾವು' ಹಿಂಜರಿಯಬಾರದೆಂದು ಬಂಗಾಲದ ಮಿತ್ರರಿಗೆ ಉತ್ತರವಾಗಿ ಬರೆದಿದ್ದೀರಿ. 'ನಾವು' ಎಂದರೆ ಉಚ್ಚ ಜಾತಿಯವರೆಂಬುದು ನಿಮ್ಮ ಅರ್ಥವಿದೆ. ಆದರೆ ಆಂಧ್ರರಲ್ಲೂ ಮತ್ತು ಇನ್ನುಳಿದ ದಕ್ಷಿಣ ಭಾಗದಲ್ಲೂ ಬ್ರಾಹ್ಮಣರು ಬ್ರಾಹ್ಮಣೇತರರ (ಉಳಿದ ಮೂರು ವರ್ಣದವರ) ನೀರನ್ನು ತೆಗೆದುಕೊಳ್ಳುವುದಿಷ್ಟೇ ಅಲ್ಲ; ಆದರೆ ಹೆಚ್ಚು ಕನಿಷ್ಠತರಾದವರು ಅವರನ್ನು ಮುಟ್ಟಿಸಿಕೊಳ್ಳುವುದೂ ಇಲ್ಲ. ಜಾತಿಯ ಉಚ್ಚ ನೀಚ ಭಾವವನ್ನು ತೆಗೆದು ಹಾಕುವುದಕ್ಕೋಸುಗ ಭಿನ್ನ ಜಾತಿಗಳಲ್ಲಿ ಸಹಭೋಜನವು ಅತ್ಯವಶ್ಯವಾದುದಲ್ಲವೆಂದು ನೀವು ಅನೇಕ ಸಲ ಹೇಳಿದ್ದೀರಿ. ಇದನ್ನು ಸ್ಪಷ್ಟೀಕರಿಸುವುದಕ್ಕೆ ಒಮ್ಮೆ ಪಂಡಿತ ಮಾಲವೀಯರ ಹೆಸರನ್ನೂ ಉದಾಹರಿಸಿದ್ದೀರಿ. ನಿಮ್ಮ ಕೈಯೊಳಗಿನ ಅನ್ನೋದಕಗಳನ್ನು ಅವರು ಸ್ವೀಕರಿಸದಿದ್ದರೂ ನಿಮ್ಮ ವಿಷಯದಲ್ಲಿ ಅವರು ತಿರಸ್ಕಾರ ತೋರಿಸಿದರೆಂದು ನೀವು ತಿಳಿಯಲಾರಿರೆಂದೂ, ಮತ್ತು ಪರಸ್ಪರರಲ್ಲಿ ನಿಮಗೆ ಆದರವೂ ಮರ್ಯಾದೆಯೂ ಇರುವುದೆಂದೂ ಹೇಳಿದ್ದೀರಿ. ಮಾಲವೀಯವರ ಕೃತಿಯಲ್ಲಿ ತಿರಸ್ಕಾರವಿರದೆಂದು ನಾನಾದರೂ ನಂಬುತ್ತೇನೆ. ಆದರೆ ನಮ್ಮ ಭಾಗದಲ್ಲಿ ಬ್ರಾಹ್ಮಣೇತರರು ಆಹಾರವನ್ನು ಮುಟ್ಟುವುದೊತ್ತಟ್ಟಿಗಿರಲಿ, ಅವರು ನೋಡಿದರೆ ಸಾಕು, ಆ ಅನ್ನವು ಬ್ರಾಹ್ಮಣರಿಗೆ ಊಟಕ್ಕೆ ಬರುವುದಿಲ್ಲ. ಇದು ನಿಮಗೆ ಗೊತ್ತುಂಟೋ ? ಅದೇಕೆ! ಊಟದ ವೇಳೆಯಲ್ಲಿ ಬೀದಿಯಲ್ಲಿಯ ಅಸ್ಪೃಶ್ಯರ ಧ್ವನಿ ಕಿವಿಗೆ ಬಿದ್ದರೆ ಬ್ರಾಹ್ಮಣನು ಕೋಪಗೊಂಡು ಉಣ್ಣುವುದನ್ನು ಬಿಟ್ಟು ಎದ್ದು ಹೋಗುವನು. ಈ ಬ್ರಾಹಣನ ಕೃತಿಯಲ್ಲಿ ತಿರಸ್ಕಾರವಿಲ್ಲವೆಂದರೆ ಇದರ ಅರ್ಥವೇನು. ಇದರಿಂದ ಬ್ರಾಹ್ಮಣರು ತಾವು ಹೆಚ್ಚಿನವರಿರುವರೆಂದು ತಿಳಿದಂತಾಗುವುದಿಲ್ಲವೋ ? ಈ ವಿಷಯವನ್ನು

ಸ್ಪಷ್ಟಗೊಳಿಸುವಿರಾ? ನಾನು ಸ್ವತಃ ಬ್ರಾಹ್ಮಣನಿರುವುದರಿಂದ ಈ ಸಂಗತಿಗಳನ್ನು ನೋಡಿದ್ದೇನೆ. ಅವುಗಳನ್ನೇ ಇಲ್ಲಿ ಬರೆದಿರುವೆನು''

ಅಸ್ಪೃಶ್ಯತೆ ಸಾವಿರತಲೆಯ ರಾವಣನು. ಅದು ನೈತಿಕ ಮತ್ತು ಧಾರ್ಮಿಕ ಪ್ರಶ್ನೆಯಾಗಿದೆ. ಆದರೆ ಸಹಭೋಜನವು ಸಾಮಾಜಿಕ ಪ್ರಶ್ನೆ. ಸದ್ಯದ ಅಸ್ಪೃಶ್ಯತೆಯ ಭಾವನೆಯ ಹಿಂದೆ ನಿಸ್ಸಂಶಯವಾಗಿಯೂ ಕೆಲವೊಂದು ಮಾನವರ ವಿಷಯದಲ್ಲಿ ತಿರಸ್ಕಾರವು ಅಡಗಿರುವುದು. ಅದು ಸಮಾಜದ ಮರ್ಮವನ್ನೇ ತಿನ್ನುತ್ತಿರುವ ಒಂದು ವಿಷ ಜಂತುವಾಗಿದೆ. ಮನುಷ್ಯನ ಸ್ವಾಭಾವಿಕ ಹಕ್ಕಿನ ಮೇಲೆ ಅದೊಂದು ಗದೆಯು. ಸಹಭೋಜನದ ಮಾತು ಬೇರೆ; ಈ ವಿಷವೇ ಬೇರೆ. ಸಮಾಜ ಸುಧಾರಕನು ಇವೆರಡನ್ನು ಕೂಡಿಸಬಾರದೆಂದು ನಾನು ಒತ್ತಿ ಹೇಳುತ್ತೇನೆ. ಇವೆರಡನ್ನು ಕೂಡಿಸುವುದರಿಂದ ಅಸ್ಪೃಶ್ಯತಾನಿವಾರಣೆಯ ಪವಿತ್ರ ಕಾರ್ಯಕ್ಕೆ ಭಂಗ ತಂದಂತಾಗುತ್ತದೆ. ಈ ಬ್ರಾಹ್ಮಣ ತರುಣರ ಸಂಶಯಗಳು ನಿಜವಾದವುಗಳು. ಈ ಅನಿಷ್ಟವು ಎಷ್ಟು ಅತಿರೇಕವಾಗಿರುವುದೆಂಬುದನ್ನು ಅವರ ಸಂಶಯವು ಸೂಚಿಸುತ್ತದೆ. ಬ್ರಾಹ್ಮಣನೆಂಬ ಶಬ್ದಕ್ಕೆ ಒಂದಾನೊಂದು ಕಾಲಕ್ಕೆ ಸಂಪೂರ್ಣ ವಿನಯ, ಸ್ವಾರ್ಥತ್ಯಾಗ, ಪವಿತ್ರತೆ, ಧೈರ್ಯ, ಕ್ಷಮೆ ಮತ್ತು ವಿಜ್ಞಾನಗಳೆಂದು ಅರ್ಥವಾಗಬೇಕು. ಆದರೆ ಇಂದು ಆ ಪವಿತ್ರಭೂಮಿ ಬ್ರಾಹ್ಮಣ ಬ್ರಾಹ್ಮಣೇತರರೆಂಬ ಭೇದದಿಂದ ಅತ್ಯಂತ ವಿಕೃತ ರೂಪವನ್ನು ಹೊಂದಿರುವುದು. ಸೇವಾಧರ್ಮವನ್ನು ಪರಿಪಾಲಿಸುತ್ತಿದ್ದುದರಿಂದ ಸ್ವಾಭಾವಿಕವಾಗಿ ದೊರೆತಿದ್ದ ಮೇಲ್ಮೆಯನ್ನು ಅನೇಕ ಬ್ರಾಹ್ಮಣರು ಈಗ ಕಳೆದುಕೊಂಡಿರುವುದನ್ನು ನಾವು ನೋಡುತ್ತೇವೆ. ಆಗ ಬ್ರಾಹ್ಮಣನು ತನ್ನನ್ನು ಇತರರಿಗಿಂತ ಹೆಚ್ಚಿನವನೆಂದು ತಿಳಿಯಲೆಬೇಕೆಂದು ಹೇಳುತ್ತಿರಲಿಲ್ಲ. ಆದರೆ ಈಗ ಬ್ರಾಹ್ಮಣನು ತನ್ನ ಸ್ವಾಭಾವಿಕ ಧರ್ಮವನ್ನು ಬಿಟ್ಟಿದ್ದರೂ ಬ್ರಾಹ್ಮಣನೆಂದು ಕರೆಯಿಸಿಕೊಳ್ಳಲು ಹಾತೊರೆಯುತ್ತಿದ್ದುದನ್ನು ನೋಡಿ, ಹಿಂದುಸ್ಥಾನದ ಕೆಲವು ಭಾಗಗಳಲ್ಲಿ ಬ್ರಾಹ್ಮಣೇತರರಿಗೆ ಬ್ರಾಹ್ಮಣನ ವಿಷಯದಲ್ಲಿ ಒಂದು ಬಗೆಯ ಅಸೂಯೆ ಉಂಟಾಗಿರುವುದು. ಹಿಂದು ಧರ್ಮದ ಮತ್ತು ಹಿಂದು ದೇಶದ ಸುದೈವದಿಂದ ನನಗೆ ಈ ಪತ್ರ ಬರೆದ ಮಿತ್ರರು ಬ್ರಾಹ್ಮಣರಾಗಿದ್ದಾರೆ. ತಮ್ಮ

ಬುದ್ಧಿ ಬಲಗಳನ್ನೆಲ್ಲ ವೆಚ್ಚಮಾಡಿ ಇದರ ವಿರುದ್ಧವಾಗಿ ಹೋರಾಡಿ ಬ್ರಾಹ್ಮಣೇತರರ ಸೇವೆಯನ್ನು ಅವರು ಮಾಡುತ್ತಿರುವರು. ಅವರ ಈ ಸ್ವಾರ್ಥತ್ಯಾಗಪೂರ್ಣವೂ ಸ್ತುತ್ಯವೂ ಆದ ಕಾರ್ಯವು ಅವರ ಉಚ್ಚವಾದ ಪರಂಪರೆಗೆ ಅನುರೂಪವಾಗಿರುವುದು. ಎಲ್ಲೆಲ್ಲಿಯೂ ಅಸ್ಪೃಶ್ಯತೆಯನ್ನು ಹೊಡೆದೋಡಿಸುವುದರಲ್ಲಿ ಬ್ರಾಹ್ಮಣರು ಮುಂದಾಳುಗಳಾಗಿದ್ದಾರೆ. ನಮ್ಮ ಆಂಧ್ರ ಮಿತ್ರರು ಉದಾಹರಿಸಿದಂತಹ ದಕ್ಷಿಣ ಬ್ರಾಹ್ಮಣರಿಗೆ ನಾನು ಹೇಳುವುದಿಷ್ಟೆ:— ಈಗಿನ ಕಾಲದ ಚಿನ್ಹಗಳನ್ನರಿತು ತಾವು ಹೆಚ್ಚಿನವರೆಂಬ ಸುಳ್ಳು ಅಭಿಮಾನವನ್ನು ತೊರೆಯಬೇಕು. ಮತ್ತು ಬ್ರಾಹ್ಮಣೇತರರು ಸಮೀಪದಲ್ಲಿ ಹಾಯ್ದರೆ ಮೈಲಿಗೆಯಾಗುವುದೆಂದು, ಬ್ರಾಹ್ಮಣೇತರರ ಧ್ವನಿ ಕಿವಿಯಲ್ಲಿ ಬಿದ್ದೊಡನೆಯೆ ಉಣ್ಣುತ್ತಿದ್ದ ಅನ್ನವು ಅಪವಿತ್ರವಾಗುವುದೆಂದು ತಿಳಿವುದನ್ನು ಬಿಟ್ಟುಬಿಡಬೇಕು. ಪ್ರತಿಯೊಂದು ವಸ್ತುವಿನಲ್ಲಿ ಬ್ರಹ್ಮನನ್ನು ಕಾಣಲು ಬ್ರಾಹ್ಮಣರು ಜಗತ್ತಿಗೆ ಬೋಧಿಸಿದರು. ಆದುದರಿಂದ ನಿಜವಾಗಿಯೂ ಮೈಲಿಗೆ ಹೊರಗಿನಿಂದ ಬರುವುದು ಅಸಂಭವವು; ಅದು ಒಳಗಿನಿಂದಲೇ ಬರಬಹುದು. ಅಸ್ಪೃಶ್ಯವಾದವು ನಮ್ಮ ಮನಸಿನಲ್ಲಿ ಬರುವ ಕ್ಷುದ್ರವಿಚಾರ ಸಂಗ್ರಹವು. ಆದರೆ ಅಸ್ಪೃಶ್ಯರೆಂಬ ಮನುಷ್ಯರು ಇರಲಾರರು ಎಂಬ ತತ್ವವನ್ನು ಬ್ರಾಹ್ಮಣರು ಪುನಃ ಜಗತ್ತಿಗೆ ಸಾರಬೇಕು. ಮಾನವನು ತಾನೇ ತನ್ನ ಬಂಧನಕಾರಕನಿದ್ದಂತೆ ತನ್ನ ಮೋಕ್ಷದಾಯಕನೂ ತಾನೇ ಆಗಿದ್ದಾನೆ, ಎಂಬುದನ್ನು ಬ್ರಾಹ್ಮಣರು ಜಗತ್ತಿಗೆ ಕಲಿಸಿದರು.

ಈ ನಮ್ಮ ಮಿತ್ರರು ಹೇಳಿದ ಕಾರಣಗಳಿಂದ ಬ್ರಾಹ್ಮಣೇತರರು ಉದ್ವಿಗ್ನರಾಗಲು ಕಾರಣವಿಲ್ಲ. ಆಂಧ್ರದ ಈ ಬ್ರಾಹ್ಮಣ ತರುಣನಂತೆ ಅನೇಕ ಬ್ರಾಹ್ಮಣರು ಈಗಿದ್ದ ಉಚ್ಚನೀಚ ಭಾವವನ್ನು ತೆಗೆದೊಗೆಯಲು ಹೋರಾಡುವರು. ಕೆಲ ಬ್ರಾಹ್ಮಣರ ಪಾಪಕ್ಕೋಸುಗ ಇಡೀ ಬ್ರಾಹ್ಮಣ ವರ್ಗವನ್ನೇ ದೂಷಿಸುತ್ತಿರುವ ಪ್ರವೃತ್ತಿಯನ್ನು ನಾನು ನೋಡುತ್ತಿರುವೆನು. ಆದರೆ ಇದು ಸರಿಯಲ್ಲ. ಬ್ರಾಹ್ಮಣೇತರರು ಗಂಭೀರ ಭಾವವುಳ್ಳವರಾಗಬೇಕು. ಮತ್ತು ಮೊದಲೇ ತಪ್ಪು ದಾರಿಯಲ್ಲಿ ನಡೆವ ಹಲಕೆಲವು ಬ್ರಾಹ್ಮಣರ ವರ್ತನವು ತಮ್ಮೊಡನೆ ಸರಿಯಾಗಿರಬೇಕೆಂದು ನಿರೀಕ್ಷಿಸು

ವುದನ್ನು ಬಿಡಬೇಕು. ದಾರಿಯಲ್ಲಿ ಯಾರಾದರೂ ನನ್ನನ್ನು ಮರ್ಯಾದಿ ಸಲ್ಲಿಲ್ಲವಾದರೆ, ಅಥವಾ ನನ್ನ ಸ್ಪರ್ಶ ಇಲ್ಲವೆ ಧ್ವನಿಯಿಂದ ತಮಗೆ ಮೈಲಿಗೆಯಾಗುವುದೆಂದು ತಿಳಿದರೆ, ಅದರಿಂದ ನನಗೇನೂ ಅಪಮಾನವೆನಿಸದು. 'ನನನ್ನು ಮುಟ್ಟೀ ದೂರ ಹೋಗೆ'ಂದು ಅವನು ಹೇಳಿದರೆ ನಾನು ದೂರ ಸರಿದು ಹೋಗದಿದ್ದರಾಯಿತು. ಇಲ್ಲವೆ ಅವನು 'ನಿನ್ನ ಧ್ವನಿಯಿಂದ ಮೈಲಿಗೆಯಾಗುವುದು ನೀನು ಮಾತಾಡಬೇಡ' ಎಂದು ಹೇಳಿದರೆ ನಾನು ಅವನಿಗೆ ಹೆದರಿ ಮಾತಾಡುವುದನ್ನು ಬಿಡದಿದ್ದರಾಯಿತು. ಅವನು ಹೆಚ್ಚಿನವನೆಂದು ಅಜ್ಞಾನವಶನಾಗಿ ತಿಳಿವುತ್ತಿರುವುದನ್ನು ನೋಡಿ ನನಗೆ ಖೇದವೆನಿಸುತ್ತದೆ. ಆದರೆನಿಟ್ಟಿಗೆದ್ದು ಅವನ ವಿಷಯಕ್ಕೆ ತಿರಸ್ಕಾರ ಭಾವವನ್ನು ತಾಳಲಾರೆನು. ನನ್ನ ವಿಷಯದಲ್ಲಿ ಅನ್ಯಾಯವಾದ ತಿರಸ್ಕಾರವಿರಬಾರದೆಂದು ನಾನು ಬಯಸುವಂತೆ ನಾನೂ ಅನ್ಯರ ವಿಷಯದಲ್ಲಿ ತಿರಸ್ಕಾರವನ್ನು ತಾಳಲಾರೆನು. ಆತ್ಮ ನಿಗ್ರಹವನ್ನು ಕಳಕೊಂಡ ಬ್ರಾಹ್ಮಣೇತರನ ಪಕ್ಷವು ಬಲಗುಂದುವುದು. ಮತ್ತು ಬ್ರಾಹ್ಮಣೇತರರು ಬ್ರಾಹ್ಮಣರ ವಿಷಯದಲ್ಲಿ ತಮ್ಮ ತಿರಸ್ಕಾರವನ್ನು ಅತಿರೇಕಗೊಳಿಸಿ ತಮಗೆ ಅನುಕೂಲರಾದ ಬ್ರಾಹ್ಮಣರನ್ನು ಗೊಂದಲದಲ್ಲಿ ಕೆಡವಬಾರದು. ಬ್ರಾಹ್ಮಣನು ಹಿಂದುಧರ್ಮವೃಕ್ಷದ ಮತ್ತು ಮಾನವ ಕುಲವೃಕ್ಷದ ಅತ್ಯಂತ ಸುಂದರವಾದ ಕುಸುಮದಂತೆ ಶೋಭಿಸುವನು. ನನ್ನ ಯಾವ ಕೃತಿಯಿಂದಲೂ ನಾನು ಆ ಕುಸುಮವನ್ನು ಬಾಡಗೊಡೆನು. ಆ ಕುಸುಮಕ್ಕೆ ಆತ್ಮರಕ್ಷಣೆಯ ಬಲವು ವಿಪುಲವಾಗಿರುವುದನ್ನು ಬಲ್ಲೆನು. ಅದು ಈ ಮೊದಲೆ ಎಷ್ಟೋ ಆಪತ್ತುಗಳನ್ನು ಎದಿರಿಸಿ ಪಾರಾಗಿ ಉಳಿದಿರುವುದು. ಬ್ರಾಹ್ಮಣೇತರರು ಆ ಹೂವಿನ ಸುಗಂಧವನ್ನೂ ತೇಜಸ್ಸನ್ನೂ ನಾಶಗೊಳಿಸಲು ಯತ್ನಿಸಿದರೆಂಬ ಅಪವಾದಕ್ಕೆ ಗುರಿಯಾಗದಿರಲಿ. ಬ್ರಾಹ್ಮಣರನ್ನು ನಾಶಗೊಳಿಸಿ ಬ್ರಾಹ್ಮಣೇತರರು ಮೇಲೇಳುವುದು ನನಗೆ ಇಷ್ಟವಿಲ್ಲ. ಬ್ರಾಹ್ಮಣರು ಆಕ್ರಮಿಸಿದ ಉಚ್ಚಸ್ಥಾನವನ್ನು ಅವರೂ ಪಡೆಯಬೇಕೆಂಬುದು ನನ್ನ ಬಯಕೆ. ಜನ್ಮದಿಂದ ಬ್ರಾಹ್ಮಣರಾಗುವರು; ಆದರೆ ಬ್ರಾಹ್ಮಣತ್ವವು ಜನ್ಮವನ್ನವಲಂಬಿಸಿರುವುದಿಲ್ಲ. ಬ್ರಾಹ್ಮಣತ್ವವು ಒಂದು ಗುಣವು; ಅತ್ಯಂತ ಕ್ಷುದ್ರನಿಗೂ ಕೀಳನಾದವನಿಗೂ ಆ ಗುಣವನ್ನು ತನ್ನಲ್ಲಿ ತಂದುಕೊಳ್ಳಲು ಅಧಿಕಾರವಿರುವುದು.

# ಯೋಗ್ಯ ಪ್ರಶ್ನೆಗಳು.

ನಮ್ಮ ಬಂಗಾಲದ ಮಿತ್ರರಂತೆ ಮದ್ರಾಸಿನ ಮಿತ್ರರೊಬ್ಬರು ಹಲವು ವಿಚಾರಪರ ಪ್ರಶ್ನೆಗಳನ್ನು ಕೇಳಿದ್ದಾರೆ. ಅಸ್ಪೃಶ್ಯತಾನಿವಾರಣೆಯು ಮುಳ್ಳಿನಂತಹ ಪ್ರಶ್ನೆಯ ವಿಷಯಕ್ಕೆ ಧರ್ಮಿಷ್ಠರಾದ ಹಿಂದುಗಳು ವಿಚಾರಮಾಡತೊಡಗಿರುವುದೊಂದು ಶುಭಚಿಹ್ನವೇ ಸರಿ. ನಮ್ಮ ಪ್ರಶ್ನೆಗಾರರು ಕಳಕಳಿಯುಳ್ಳವರಿರುವರೆಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ. ಅವು ಎಲ್ಲರ ಮನಸಿನಲ್ಲಿ ಬರುವ ಪ್ರಶ್ನೆಗಳಾಗಿವೆ. ಪ್ರವಾಸದಲ್ಲಿ ನನಗೆ ಕೇಳಿದ ಪ್ರಶ್ನೆಗಳಲ್ಲಿ ಬಾರದ ಒಂದೂ ಪ್ರಶ್ನವು ಅದರಲ್ಲಿಲ್ಲ. ನನ್ನ ಮಿತ್ರರಿಗೂ ಮತ್ತು ಅವರಂತಹ ಉಳಿದ ಕೆಲಸಗಾರರಿಗೂ ಮಾರ್ಗದರ್ಶಕವಾಗಲು ಅವುಗಳನ್ನು ಬಿಡಿಸಲೆತ್ನಿಸುವೆನು.

(೧) ಅಸ್ಪೃಶ್ಯತೆಯನ್ನು ತೆಗೆದುಹಾಕಲು ವ್ಯವಹಾರಿಕವಾದ ಉಪಾಯಗಳಾವು?

(ಅ) ಸ್ವತಂತ್ರವಾಗಿ ಯಾವುದೊಂದು ಜಾತಿಗೆ ಸೇರದ, ಎಲ್ಲ ಬ್ರಾಹ್ಮಣೇತರರು ಪ್ರವೇಶಿಸಬಹುದಾದ, ಸಾರ್ವಜನಿಕ ದೇವಾಲಯ, ಶಾಲೆ, ಬಾವಿ, ರಸ್ತೆಗಳನ್ನು ಅಸ್ಪೃಶ್ಯರಿಗೂ ತೆರೆದಿಡಬೇಕು.

(ಬ) ಸವರ್ಣ ಹಿಂದುಗಳು ಅಸ್ಪೃಶ್ಯರ ಮಕ್ಕಳಿಗೋಸುಗ ಶಾಲೆಗಳನ್ನು ತೆರೆಯಬೇಕು; ಅವಶ್ಯವಿದ್ದಲ್ಲಿ ಬಾವಿಗಳನ್ನು ತೋಡಿಸಿಕೊಡಬೇಕು; ಮತ್ತು ಅಸ್ಪೃಶ್ಯರಿಗೆ ಬೇರೆ ಬೇರೆ ನರಿಕೆಗಳು ಬಂದಾಗ ಅಥವಾ ಬೇರೆ ಏನಾದರೂ ಸಹಾಯ್ಯವು ಅವಶ್ಯವಿದ್ದಾಗ ಅವರ ಸೇವೆಯನ್ನು ಮಾಡಲು ಮುಂದೆ ಬರಬೇಕು.

(೨) ಅಸ್ಪೃಶ್ಯರ ಅಸ್ಪೃಶ್ಯತೆ ಹೋದಬಳಿಕ ಧರ್ಮದಲ್ಲಿ ಅವರ ಸ್ಥಾನವಾವುದಾಗಿರಬೇಕು?

ಧರ್ಮದಲ್ಲಿ ಅವರ ಸ್ಥಾನವು ಉಳಿದ ಸವರ್ಣಹಿಂದುಗಳ ಸ್ಥಾನವೇ ಆಗಿರುವುದು. ಅವರು ಅತಿಶೂದ್ರ ವರ್ಗದವರೆಂದು ಕರೆಯಲ್ಪಡದೆ ಶೂದ್ರವರ್ಣದವರೆಂದು ಕರೆಯಲ್ಪಡಬಹುದು.

(೩) ಅಸ್ಪೃಶ್ಯತೆಯ ಕಳಂಕವು ತೊಳೆದು ಹೋದಮೇಲೆ ಉಚ್ಚ ಜಾತಿಯ ಧರ್ಮಿಷ್ಠ ಬ್ರಾಹ್ಮಣರಿಗೂ ಅಸ್ಪೃಶ್ಯರಾಗಿದ್ದವರಿಗೂ ಯಾವ ಸಂಬಂಧವಿರಬೇಕು ?

ಬ್ರಾಹ್ಮಣ ಬ್ರಾಹ್ಮಣೇತರರ ನಡುವೆ ಇದ್ದ ಸಂಬಂಧವೇ ಇರಬೇಕು.

(೪) ನೀವು ಜಾತಿಸಂಕರವನ್ನು ಸಮರ್ಥಿಸುತ್ತೀರಾ?

ನಾನು ಎಲ್ಲ ಜಾತಿಗಳನ್ನು ತೆಗೆದುಹಾಕಿ ನಾಲ್ಕು ವರ್ಣಗಳನ್ನು ಮಾತ್ರ ಕಾದಿಡುವೆನು.

(೫) ಈಗಿದ್ದ ಗುಡಿಗಳ ಗೊಡವೆಗೆ ಹೋಗದೆ ಅಸ್ಪೃಶ್ಯರು ತಮಗೋಸುಗ ಸ್ವತಂತ್ರವಾದ ಬೇರೆ ದೇವಾಲಯಗಳನ್ನು ಏಕೆ ಕಟ್ಟಿಸಿಕೊಳ್ಳಬಾರದು ?

'ಉಚ್ಚ' ಜಾತಿಯವರು ಅವರಿಗೆ ಅಂತಹ ಕಾರ್ಯಗಳನ್ನು ನೆರವೇರಿಸಲು ಬೇಕಾಗುವ ಶಕ್ತಿಯನ್ನು ಅವರಲ್ಲಿ ಉಳಿಯಗೊಟ್ಟಿಲ್ಲ. ನಮ್ಮ ದೇವಾಲಯಗಳ ಗೊಡವೆಗೆ ಅವರು ಬರುತ್ತಿರುವರೆಂದು ಹೇಳುವುದು ಅನ್ಯಾಯವಾದದ್ದು. ಉಚ್ಚ ವರ್ಣದವರೆಂದುಕೊಳ್ಳುವ ನಾವು ಎಲ್ಲ ಹಿಂದುಗಳಿಗೆ ಸಾಮಾನ್ಯವಾದ ಗುಡಿ ಗುಂಡಾರಗಳಲ್ಲಿ ಅವರನ್ನು ಹೋಗಗೊಟ್ಟು ಅವರ ವಿಷಯದಲ್ಲಿಯ ನಮ್ಮ ಕರ್ತವ್ಯವನ್ನು ನಾವು ಮಾಡತಕ್ಕದ್ದು.

(೬) ನೀವು ಜಾತಿ ಪ್ರಾತಿನಿಧ್ಯವನ್ನು ಎತ್ತಿ ಹಿಡಿಯುತ್ತೀರಾ ? ಆಡಳಿತದ ಎಲ್ಲ ಸಂಸ್ಥೆಗಳಲ್ಲಿ ಅಸ್ಪೃಶ್ಯರ ಸ್ವತಂತ್ರ ಪ್ರತಿನಿಧಿಗಳಿರಬೇಕೆಂದು ನೀವು ಅಭಿಪ್ರಾಯಪಡುತ್ತೀರಾ?

ಇಲ್ಲ. ಆದರೆ ಮೇಲಿನ ವರ್ಗದವರು ಉದ್ದೇಶಪೂರ್ವಕವಾಗಿ ಅವರನ್ನು ದೂರವಿರಿಸಿದ್ದರೆ ಅದರಿಂದ ಅನ್ಯಾಯವಾಗುವುದು; ಮತ್ತು ಸ್ವರಾಜ್ಯಮಾರ್ಗದಲ್ಲಿ ವಿಘ್ನವು ಉಂಟಾಗುವುದು. ಜಾತಿ ಪ್ರಾತಿನಿಧ್ಯವು ಬೇಡವೆನ್ನುವುದರಲ್ಲಿ ನಾನು ಯಾವುದೊಂದು ಜಾತಿಯವರನ್ನು ಪ್ರತಿನಿಧಿಗಳಾಗುವುದರಿಂದ ದೂರವಿರಿಸಬೇಕೆಂದಿಲ್ಲ. ಆದರೆ ತದ್ವಿರುದ್ಧ ಪ್ರಾತಿನಿಧ್ಯವನ್ನು ಪಡೆದ ಜಾತಿಗಳು ಅದನ್ನು ಪಡೆಯದ ಅಥವಾ ಪಡೆದರೂ

ಅಲ್ಪ ಪ್ರಮಾಣದಲ್ಲಿ ಅವನ್ನು ಪಡೆದ ಜಾತಿಗಳ ಯೋಗ್ಯ ಪ್ರಾತಿನಿಧ್ಯ ವನ್ನು ಸಾಧಿಸುವ ಭಾರವನ್ನು ಹೊರಲಿಕ್ಕೆ ಬೇಕು.

(೭) ವರ್ಣಾಶ್ರಮಧರ್ಮದ ಉಪಯುಕ್ತತೆಯಲ್ಲಿ ನಿಮ್ಮ ನಂಬುಗೆ ಉಂಟೋ?

ಹೌದು. ಆದರೆ ಈಗಿದ್ದುದು ವರ್ಣಾಶ್ರಮಧರ್ಮದ ವಿಕೃತಸ್ವರೂಪವು. ಆಶ್ರಮ ಚಿಹ್ನವೇ ಈಗ ಎಲ್ಲಿಯೂ ಉಳಿದಿರುವುದಿಲ್ಲ. ಎಲ್ಲೆಲ್ಲಿಯೂ ಧರ್ಮಕ್ಕೆ ವಿಪರೀತಾರ್ಥವೇ ಬಂದಿದೆ. ಈಗಿನ ಪದ್ಧತಿಯಲ್ಲಿ ಮೊದಲಿಂದ ಕೊನೆಯವರೆಗೆ ಸುಧಾರಣೆಯಾಗಬೇಕು. ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಹೊಸದಾಗಿ ಗೊತ್ತಾಗಿರುವ ಎಲ್ಲ ಸಂಶೋಧನಗಳಿಗೆ ಅದು ಅನುರೂಪವಾಗಿರಬೇಕು.

(೮) ಭಾರತವು ಕರ್ಮಭೂಮಿ ಎಂದು ನೀವು ನಂಬುತ್ತೀರಾ? ಇಲ್ಲಿ ಹುಟ್ಟಿ ಬೆಳೆದವರೆಲ್ಲ ತಮ್ಮ ತಮ್ಮ ಪೂರ್ವ ಜನ್ಮದ ಕರ್ಮಾನುಸಾರವಾಗಿ ಧನಕನಕಾದಿ ಸಂಪತ್ತು, ಬುದ್ಧಿ, ಸಾಮಾಜಿಕ ಮಾನ ಮರ್ಯಾದೆ, ಧಾರ್ಮಿಕ ಆಕಾಂಕ್ಷೆಗಳನ್ನು ಹೊಂದಿರುವರೆಂದು ನಿಮ್ಮ ನಂಬುಗೆ ಇದೆಯೋ?

ಪ್ರಶ್ನೆಕಾರರು ಯಾವ ಅರ್ಥದಿಂದ ಕೇಳುವುರೋ ಆ ಅರ್ಥದಲ್ಲಿ ನಾನು ನಂಬುವುದಿಲ್ಲ. ಪ್ರಪಂಚದಲ್ಲೆಲ್ಲಿಯೂ ಪ್ರತಿಯೊಬ್ಬನು ಬಿತ್ತಿದ್ದನ್ನು ಬೆಳಕೊಳ್ಳುವನು. ಆದರೆ ಭಾರತವು ಮುಖ್ಯವಾಗಿ ಭೋಗ ಭೂಮಿಯಾಗಿರದೆ ಮೂಲತಃ ಕರ್ಮಭೂಮಿಯಾಗಿದೆ ಎಂದು ನನ್ನ ನಂಬುಗೆ.

(೯) ಅಸ್ಪೃಶ್ಯತಾ ನಿವಾರಣೆಯ ಮಾತನ್ನು ಆಡುವ ಪೂರ್ವದಲ್ಲಿ ಅಸ್ಪೃಶ್ಯರೊಳಗೆ ಶಿಕ್ಷಣಪ್ರಸಾರವೂ ಸುಧಾರಣೆಗಳೂ ಆಗಬೇಕಾದುದು ಅತ್ಯವಶ್ಯವಲ್ಲವೆ?

ಅಸ್ಪೃಶ್ಯತೆಯ ನಿವಾರಣೆಯಾಗದೆ ಸುಧಾರಣೆಯೂ ಆಗಲಾರದು; ಶಿಕ್ಷಣವೂ ಬೆಳೆಯಲಾರದು.

(೧೦) ಕುಡಕರನ್ನು ಕುಡಿಯದವರೂ, ಮಾಂಸಾಹಾರಿಗಳನ್ನು

ಶಾಕಾಹಾರಿಗಳೂ, ದೂರವಿರಿಸುವುದು ಸ್ವಾಭಾವಿಕವೂ ನ್ಯಾಯ್ಯವೂ ಆಗಿರುವುದಿಲ್ಲವೋ ?

ಹಾಗೆಯೇ ಇರಬೇಕೆಂಬ ನಿಯಮವಿಲ್ಲ. ಕುಡಕನೊಡನೆ ಸಂಬಂಧ ವನ್ನು ಬೆಳೆಯಿಸಿ ಅವನ ಕುಡಕತನವನ್ನೇ ಬಿಡಿಸುವುದು ಕುಡಿಯದವನು ತನ್ನ ಕರ್ತವ್ಯವೆಂದು ತಿಳಿಯುತ್ತಾನೆ. ಅದರಂತೆಯೇ ಶಾಕಾಹಾರಿ ಮಾಂಸಾಹಾರಿಯನ್ನು ತನ್ನ ದಾರಿಗೆ ತರುವುದರಲ್ಲಿರುತ್ತಾನೆ.

(೧೧) ಪರಿಶುದ್ಧನಾದವನು(ಶಾಕಾಹಾರಿಯಾದ,ಕುಡಕತನವಿಲ್ಲದ ಸುಧಾರಕ ಎಂಬರ್ಥದಲ್ಲಿ) ಕುಡಿವ, ಪ್ರಾಣಹಿಂಸೆಮಾಡುವ, ಮತ್ಸ್ಯ ಮಾಂಸಭಕ್ಷಣ ಮಾಡುವ ಜನರೊಡನೆ ಸೇರಿದರೆ ಬೇಗನೆ ತಾನೂ ಅಶುದ್ಧ (ಕುಡಕ, ಮಾಂಸಾಹಾರಿ ಎಂಬರ್ಥದಲ್ಲಿ) ನಾಗುತ್ತಾನೆಂಬುದು ನಿಜ ವಾಗಿರುವುದಿಲ್ಲವೋ ?

ಮದ್ಯಪಾನ ಮತ್ತು ಮಾಂಸಾಶನವು ಪಾಪವೆಂದು ತಿಳಿಯದ ಮನುಷ್ಯನು ಅಪವಿತ್ರನೇ ಎಂದಲ್ಲ. ಆದರೆ ದುಸ್ಸಂಗತಿಯ ಸಹವಾಸ ದೋಷದಿಂದಾಗುವ ದುಷ್ಟ ಪರಿಣಾಮವನ್ನು ನಾನು ಬಲ್ಲೆ. ಅಸ್ಪೃಶ್ಯ ತೆಯನ್ನು ಕಳೆವುದೆಂದರೆ ಅಸ್ಪೃಶ್ಯರೊಡನೆ ಕೂಡಿಕೊಂಡಿರಬೇಕೆಂದಲ್ಲ.

(೧೨) ಇದಕ್ಕಾಗಿಯೇ ಕೆಲ ಸನಾತನಿ ಬ್ರಾಹ್ಮಣ ವರ್ಗದವರು ಉಳಿದ ಜಾತಿಯವರಿಂದ ಬೇರೆಯಾಗಿದ್ದುಕೊಂಡು ತಮ್ಮಂತಹದೇ ಒಂದು ವರ್ಗವನ್ನೇರ್ಪಡಿಸಿಕೊಂಡು ತಮ್ಮ ಆತ್ಮೋನ್ನತಿಗೋಸುಗ ಜೀವಿಸು ತ್ತಿರುವುದಿಲ್ಲವೋ ?

ತನಗೆ ಮೈಲಿಗೆಯಾದೀತೆಂಬ ಭಯದಿಂದ ತನ್ನ ಸುತ್ತಲು ಬೇಲಿ ಯನ್ನು ಹಾಕಿಕೊಂಡು ತನ್ನ ಪಾವಿತ್ರ್ಯವನ್ನು ಕಾಯ್ದುಕೊಳ್ಳಬೇಕೆಂಬ ಧಾರ್ಮಿಕತೆ ಹುರುಳಿಲ್ಲದ ಧಾರ್ಮಿಕತೆ; ಇದಲ್ಲದೆ ಉಳಿದವರಿಂದ ಬೇರೆ ಯಾಗಿದ್ದುಕೊಂಡು ತಮ್ಮ ಪಾವಿತ್ರ್ಯವನ್ನು ರಕ್ಷಿಸಿಕೊಳ್ಳಬೇಕೆಂಬುವ ದಿನಗಳು ಆಗಿಹೋದವು.

(೧೩) ಅಸ್ಪೃಶ್ಯರ ಸ್ವತಂತ್ರತೆಯ ಹಕ್ಕನ್ನು ಸಾರುವ ನೀವು ಭಾರ ತದ ಧರ್ಮ ಮತ್ತು ಜಾತಿ ಪದ್ಧತಿಗಳ ಸ್ವಾತಂತ್ರ್ಯದಲ್ಲಿ (ಅವುಗಳಲ್ಲಿ

ಹಿತಾಂಶಗಳು ಅಹಿತಾಂಶಗಳು ಎಷ್ಟೇ ಇರಲಿ) ಕೈಹಾಕಿದಂತಾಗುವುದಿಲ್ಲವೇ ?

ಸುಧಾರಣೆಯಾಗಬೇಕೆಂಬಾಕ್ಷಣಕ್ಕೆ ಯಾವನೊಬ್ಬನ ಅಥವಾ ಯಾವದೊಂದು ಧರ್ಮದಲ್ಲಿ ನಾನು ಹೇಗೆ ಕೈ ಹಾಕಿದಂತಾಗುವುದು. ಅಸ್ಪೃಶ್ಯತೆ ಇರಬೇಕೆಂಬುವವರ ಮೇಲೆ ಅಸ್ಪೃಶ್ಯತಾನಿವಾರಣೆಯನ್ನು ಬಲುಮೆಯಿಂದ ಹೇರಿದರೆ ಆಗ ನಾನು ಅವರ ಸ್ವಾತಂತ್ರ್ಯದಲ್ಲಿ ಅಡ್ಡ ಬಂದಂತಾದೀತು.

(೧೪) ಸನಾತನಿ ಬ್ರಾಹ್ಮಣರನ್ನು ಮೊದಲು ಮನಗಾಣಿಸದೆ ಅವರ ಧರ್ಮದಲ್ಲಿ ಕೈಹಾಕುವುದರಿಂದ ಅವರಿಗೆ ಹಿಂಸೆ ಮಾಡಿದ ಅಪರಾಧಕ್ಕೆ ನೀವು ಗುರಿಯಾಗುವುದಿಲ್ಲವೋ ?

ನನಗೆ ಸಂಪೂರ್ಣ ನಂಬುಗೆಯಾಗದೆ ನಾನು ಅವರ ಧಾರ್ಮಿಕ ಮತಗಳಲ್ಲಿ ಕೈಹಾಕುತ್ತಿರುವುದಿಲ್ಲ. ಆದುದರಿಂದ ನಾನು ಸನಾತನಿಗಳಿಗೆ ಹಿಂಸೆ ಮಾಡಿದ ಪಾಪಕ್ಕೊಳಗಾಗಲಾರೆನು.

(೧೫) ಅಸ್ಪೃಶ್ಯರ ಮಾತು ಹಾಗಿರಲಿ; ಬ್ರಾಹ್ಮಣರು ಉಳಿದಜಾತಿಯವರನ್ನು ಮುಟ್ಟಿಸಿಕೊಳ್ಳದಿದ್ದರೆ ಮತ್ತು ಅವರೊಡನೆ ಅನ್ನೋದಕ ಶರೀರ ಸಂಬಂಧಗಳನ್ನು ಮಾಡದಿದ್ದರೆ ಅವರು ಅಸ್ಪೃಶ್ಯತೆಯ ಕಲಂಕವನ್ನು ಕಾಯ್ದಿಡುವವರೆಂದು ನೀವು ಹೇಳುವಿರಾ?

ಎರಡನೆಯ ಜಾತಿಯವರನ್ನು 'ಮುಟ್ಟು'ವುದರಿಂದ ಮೈಲಿಗೆಯಾಗುವದೆಂದು ಅವರು ತಿಳಿದರೆ ನಿಜವಾಗಿಯೂ ಅಸ್ಪೃಶ್ಯತೆಯ ಕಲಂಕವನ್ನು ಕಾಯ್ದಿಟ್ಟದೋಷವು ಅವರ ತಲೆಯ ಮೇಲೆ ಇರುವುದು.

(೧೬) ಬ್ರಾಹ್ಮಣನಂತೆ ತಾನೂ ಮನುಷ್ಯನು ಎಂದು ಅಸ್ಪೃಶ್ಯನು ಬ್ರಾಹ್ಮಣರ ಅಗ್ರಹಾರಗಳಲ್ಲಿ ಒಳಿಕೆ ಮಾಡಲೆತ್ನಿಸುವುದರಿಂದ ಅವನ ಹಸಿವು ಹಿಂಗುವುದೋ ?

ಮಾನವನು ಅನ್ನದಿಂದೊಂದೇ ಜೀವಿಸುವುದಿಲ್ಲ. ಅನೇಕರಿಗೆ ಅನ್ನಕ್ಕಿಂತಲೂ ಸ್ವಾಭಿಮಾನವು ಹೆಚ್ಚಿನದಾಗಿರುತ್ತದೆ.

(೧೭) ಅಸ್ಪೃಶ್ಯರು ಅಹಿಂಸಾಮಯ ಅಸಹಕಾರದ ಸಂಪೂರ್ಣ ತತ್ವವನ್ನು ತಿಳಿಯುವಷ್ಟು ಸುಶಿಕ್ಷಿತರಾಗಿರುವುದಿಲ್ಲವಾದುದರಿಂದಲೂ,

ಬ್ರಾಹ್ಮಣರಿಗೆ ರಾಜಕಾರಣಕ್ಕಿಂತ ತಮ್ಮ ಧರ್ಮವು ಹೆಚ್ಚು ಇಷ್ಟವಾಗಿರುವುದರಿಂದಲೂ ಅಸ್ಪೃಶ್ಯತೆಯ ವಿಷಯದಲ್ಲಿಯ ನಿಮ್ಮ ಸತ್ಯಾಗ್ರಹವು ಹಿಂಸೆಯಲ್ಲಿ ಪರಿಣಮಿಸಲಿಕ್ಕಿಲ್ಲವೋ ?

ವಾಯ್ಕೊಂ ಸತ್ಯಾಗ್ರಹವನ್ನುದ್ದೇಶಿಸಿ ಈ ಪ್ರಶ್ನೆಯಿದ್ದರೆ, ಅಲ್ಲಿ ಅಸ್ಪೃಶ್ಯರು ತೋರಿಸಿದ ಆತ್ಮ ನಿಗ್ರಹವು ಅತ್ಯಾಶ್ಚರ್ಯಕರವಾಗಿದೆ ಎಂದು ಕಾಣಬರುದಿದೆ. ಈ ಪ್ರಶ್ನೆಯ ಕಡೆಯ ಭಾಗವು ಬ್ರಾಹ್ಮಣರು ಹಿಂಸೆಯನ್ನು ಕೈಕೊಳ್ಳಬಹುದೆಂಬುದನ್ನು ಸೂಚಿಸುತ್ತದೆ. ಅವರು ಹಿಂಸಾಮಾರ್ಗವನ್ನವಲಂಬಿಸಿದರೆ ನನಗೆ ದುಃಖವೆನಿಸುತ್ತದೆ. ಹಾಗೆ ಮಾಡುವುದರಿಂದ ಅವರು ತಮ್ಮ ಧರ್ಮಕ್ಕೆ ಮರ್ಯಾದೆ ಕೊಡುವುದರ ಬದಲು ಧರ್ಮದ ವಿಷಯದಲ್ಲಿ ಅಜ್ಞಾನವನ್ನೂ ತಿರಸ್ಕಾರವನ್ನೂ ವ್ಯಕ್ತಮಾಡಿದಂತಾಗುವುದೆಂದು ನನ್ನ ಮತ.

(೧೮) ಉದ್ಯೋಗ, ವ್ಯವಹಾರ, ಕುಲಗೋತ್ರಗಳ ಭೇದವಿಲ್ಲದೆ ಎಲ್ಲರೂ ಸರಿ ಸಮಾನರಾಗಬೇಕೆಂದು ನೀವು ಹೇಳುತ್ತೀರಾ ?

ಯಾವ ಜಾತಿಯೇನು, ಯಾವ ಕುಲವೇನು, ಯಾವ ಗೋತ್ರವೇನು, ಯಾವ ವರ್ಣವೇನು, ಹಸಿವು ನೀರಡಿಕೆಗಳೆಂಬುವು ಎಲ್ಲರಿಗೂ ಸರಿ ಸಮಾನವಾದುವೇ, ಅದರಂತೆಯೇ ಸಮಾನತೆ ಎಂಬುದು ಎಲ್ಲರಿಗೂ ಸಮಾನವಾದುದು. ಇದು ಪ್ರತಿಯೊಬ್ಬ ಮಾನವನ ಸ್ವಾಭಾವಿಕ ಹಕ್ಕು; ಕಾಯದೆಯ ದೃಷ್ಟಿಯಿಂದ ನ್ಯಾಯ್ಯವಾದುದು.

(೧೯) ಕುಟುಂಬಸ್ಥನಾದ ಸಾಮಾನ್ಯ ಗೃಹಸ್ಥನಿಗೆ ನೀವು ಹೇಳುವ ಈ ಶ್ರೇಷ್ಠವಾದ ತತ್ವದ ಉಪಯುಕ್ತತೆ ಏನು? ಈ ತತ್ವಗಳ ಉಪಯೋಗವು ಕರ್ಮಕ್ಷಯವನ್ನು ಮಾಡಿಕೊಂಡ ಮಹಾತ್ಮರಿಗೆ ಮಾತ್ರ ಆಗುವುದು. ಅವರೇ ಈ ತತ್ವವನ್ನು ಆಚರಿಸಬಲ್ಲರು. ಈ ತತ್ವದ ಆಚಣೆಯಿಂದ ಮೋಕ್ಷವಾದರೂ ಲಭಿಸಬಲ್ಲದು.

ಯಾವ ಮಾನವ ಪ್ರಾಣಿಗೂ ಜನ್ಮದಿಂದ ಅಸ್ಪೃಶ್ಯತೆ ಉಂಟಾಗುವುದಿಲ್ಲ ಎಂದು ಹೇಳುವ ಮಾತಿನಲ್ಲಿ ಅಷ್ಟೊಂದು ಮಹತ್ತರವಾದ ಪರತತ್ವವಿರುವುದೆಂದು ತಿಳಿಯಲು ಕಾರಣವಿಲ್ಲ. ಅದೊಂದು ಸಾಮಾನ್ಯ

ವಾದ ತತ್ವವು. ಕರ್ಮಠರಾದ ಹಿಂದುಗಳನ್ನುಳಿದು ಜಗತ್ತಿನಲ್ಲಿ ಎಲ್ಲರೂ ಆ ತತ್ವಕ್ಕೆ ಮಾನ್ಯತೆಯನ್ನಿತ್ತಿರುವರು. ಈಗ ನಮ್ಮ ಆಚರಣೆಯಲ್ಲಿರುವ ಅಸ್ಪೃಶ್ಯತೆಯನ್ನು ಋಷಿಗಳು ಹೇಳಿದ್ದಾರೆಂಬ ಮಾತಿನಲ್ಲಿ ಅನೇಕ ಸಾರೆ ನಾನು ನನ್ನ ಸಂಶಯವನ್ನು ವ್ಯಕ್ತ ಮಾಡಿದ್ದೇನೆ.

---

## ಒಬ್ಬ ದುರಾಗ್ರಹಿ.

ದುರಾಗ್ರಹಗಳು ಬೇಗ ನಾಶವಾಗುವದಿಲ್ಲ. ಪತಿತರ ವಿಷಯದಲ್ಲಿ ಹಿಂದುಗಳು ಭಯಂಕರ ಅನ್ಯಾಯವನ್ನು ಮಾಡಿರುವರೆಂದು ಸನಾತನ ಹಿಂದುಸಮಾಜವು ಒಪ್ಪುತ್ತಿದ್ದರೂ, ಅನೇಕರು— ಉಳಿದ ವಿಷಯದಲ್ಲಿ ಅವರು ಉದಾರಹೃದಯರಾಗಿದ್ದರೂ,– ಅಸ್ಪೃಶ್ಯತೆಯಲ್ಲಿಯ ಅನ್ಯಾಯವನ್ನು ಕಾಣರು. ನನಗೊಬ್ಬರು ಹೀಗೆ ಬರೆಯುತ್ತಾರೆ:–

"ನಾನು ತಮ್ಮ ಮೊಲನೆಯ ತರಗತಿಯ ಅನುಯಾಯಿ ಎಂದು ಹೇಳಿಕೊಳ್ಳಲಾರೆ; ಆದರೂ ನಾನೊಬ್ಬ ತಮ್ಮ ನಮ್ರ ಅನುಯಾಯಿ. ಅಸ್ಪೃಶ್ಯತೆಯ ವಿಷಯದಲ್ಲಿ ತಮಗಿರುವ ತೀವ್ರ ಭಾವನೆ ನನಗಿಲ್ಲವೆಂದು ನಾನು ಒಪ್ಪುವೆನು. ಅಸ್ಪೃಶ್ಯರು ಪತಿತರೆಂದಾಗಲಿ, ದಲಿತರೆಂದಾಗಲಿ, ಕೆಲವರು ಹೇಳುವುದನ್ನು ನಾನು ಒಪ್ಪಲಾರೆ. ಅಸ್ಪೃಶ್ಯರೆಂಬವರು ಒಂದು ಬಗೆಯ ಸ್ವಾತಂತ್ರ್ಯವನ್ನು ಉಪಭೋಗಿಸುತ್ತಿರುವರೆಂದೂ ಮೊದಲು ಕೆಲಮಟ್ಟಿಗೆ ಸುಖಿಗಳಾಗಿದ್ದರೆಂದೂ ತಮಗೆ ತಿಳಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಪಂಚಮರ ಭೂತ ವರ್ತಮಾನಗಳನ್ನು ನಿರೀಕ್ಷಿಸಿದರೆ ಅವರಲ್ಲಿ ಉಂಟಾಗಿರುವ ಜಾಗ್ರುತಿಗೋಸುಗ ಅವರನ್ನು ಅಭಿನಂದಿಸಲು ಕಾರಣವಿಲ್ಲೆಂದು ನನಗೆ ತೋರುತ್ತದೆ. ಅವರ ಜಾಗ್ರುತಿಯಿಂದ ಯಾವ ಲಾಭವೂ ಆಗಿಲ್ಲ. ಈಗ ಇತರರು ಪಡೆಯುತ್ತಿರುವ ಶಿಕ್ಷಣವನ್ನು ಪಡೆಯಬೇಕೆಂಬ ಹಂಬಲವೂ ನೌಕರಿಯ ತುಣುಕು ಮಿಣುಕಿನ ಆಶೆಯೂ ಅವರನ್ನು ಹೆಚ್ಚು ಪರಾಧೀನರಾಗಿ ಮಾಡುತ್ತಿರುವುದು. ಶಾರೀರಿಕ ಶ್ರಮದಿಂದ ಹೊಟ್ಟೆ ತುಂಬಿಕೊಳ್ಳುವುದನ್ನು ಬಿಟ್ಟು ಕಚೇರಿಯ ನೌಕರಿಗಳನ್ನು ಸ್ವೀಕರಿಸುವವನ ಸ್ಥಿತಿ

ಕೆಡುವುವೆಂಬದರಲ್ಲಿ ಸಂಶಯವಿಲ್ಲ. ಇದು ಬ್ರಾಹ್ಮಣರಾದ ನಮ್ಮ ದುಃಖದ ಅನುಭವವಾಗಿದೆ. ಹಿಂದೆ ನಮ್ಮವರು ಪಂಚಮರನ್ನು ತಮ್ಮ ಕುಟುಂಬಕ್ಕೆ ಸೇರಿದವರೆಂದು ತಿಳಿದು ಅವರಿಗೆ ಅನ್ನವಸ್ತ್ರಗಳನ್ನು ಕೊಡುತ್ತಿದ್ದರು. ಆದರೆ ಈಗ ಅದೆಲ್ಲವೂ ಹೋಗಿದೆ. ಅನೇಕ ಅಸ್ಪೃಶ್ಯರು ಪರದೇಶಗಳಿಗೆ ಹೋಗಿ ಅಲ್ಲಿ ಪರದೇಶದವರ ಗುಲಾಮರಾಗಿದ್ದಾರೆ; ಅಥವಾ ಅಜ್ಞಾನದಿಂದ ಆಳರಸರ ಹಸ್ತಕರಾಗಿ ಅವರ ದಂಡಿನಲ್ಲಿ ತಿಂಗಳೊಂದಕ್ಕೆ ೧೫ ರೂಪಾಯಿಯ ವೈಭವದ ಸಂಬಳಕ್ಕೆ ಸೇರಿದ್ದಾರೆ. ಅವರನ್ನು ಸುಧಾರಿಸಿ ಇತರ ಜಾತಿಯವರಿಗೆ ಸಮಾನರಾಗಿ ಮಾಡುವ ನಿಮ್ಮ ಪ್ರಯತ್ನವು ನಿಷ್ಫಲವಾಗುವುದು ಸಿದ್ಧ. ಸಾಮಾಜಿಕ ದೃಷ್ಟಿಯಿಂದ ಅವರ ಉದ್ಧಾರಕ್ಕೋಸ್ಕರ ಮಾಡಬೇಕಾದುದು ಬಹಳವಿದೆ ಎಂದು ನನಗೆ ಎನಿಸುತ್ತಿದ್ದರೂ, ಈ ಕೆಲಸವು ಯಕ್ಷಿಣಿಯ ಕಡ್ಡಿಯಿಂದ ಒಂದು ದಿವಸದಲ್ಲಿ ಆಗುವಂತಿಲ್ಲ. ಅವರಿಗೆ ಶಿಕ್ಷಣವು ದೊರೆಯಬೇಕು; ಆರ್ಥಿಕ ಆಪತ್ತುಗಳೊಳಗಿಂದ ಅವರು ಪಾರಾಗಬೇಕು. ಬಹುಕಾಲದಿಂದ ನೆಲೆಗೊಂಡಿರುವ ಕುಡುಕತನ, ಸತ್ತ ಪ್ರಾಣಿಗಳ ಮಾಂಸಭಕ್ಷಣ, ಗೋವಧೆ, ಇವೇ ಮೊದಲಾದ ದುಷ್ಟ ಪದ್ಧತಿಗಳು ಅವರಲ್ಲಿ ಇಲ್ಲದಂತಾಗಬೇಕು. ಇದನ್ನು ಸಾಧಿಸುವ ಪ್ರಯತ್ನದಲ್ಲಿ ಲಕ್ಷಾಂತರ ರೂಪಾಯಿಗಳು ವೆಚ್ಚವಾಗಬೇಕು. ಅವರಲ್ಲಿ ಮನೆಮಾಡಿಕೊಂಡಿದ್ದ ದುಷ್ಟ ಪದ್ಧತಿಗಳೇ ಅವರನ್ನು ಪ್ರತಿಯೊಂದು ಹಳ್ಳಿಯಲ್ಲಿಯೂ ಪ್ರತ್ಯೇಕವಾಗಿ ಒಂದು ಮೂಲೆಯಲ್ಲಿರಿಸಲು ಕಾರಣಗಳಾಗಿವೆ. ಮೇಲೆ ಹೇಳಿದ ಕಾರ್ಯವನ್ನು ಮಾಡದೆ ಅಸ್ಪೃಶ್ಯರನ್ನಪ್ಪಿಕೊಳ್ಳಲು ಉಳಿದವರ್ಗದವರಿಗೆ ಹೇಳುವುದರಿಂದ ಸಮಾಜಕ್ಕೆ ಅಧೋಗತಿ ಒದಗುವುದೆಂದು ನಾನು ತಿಳಿದೆನು. ಸಮಾಜದ ಈ ಅಧೋಗತಿ ತಮಗೆ ಇಷ್ಟವಿರಲಾರದಷ್ಟೇ ? ''

'ಅಸ್ಪೃಶ್ಯ'ರನ್ನು ಮುಟ್ಟದಿರುವುದರಲ್ಲಿ ಸಮಾಜದ ಅಧೋಗತಿಯುಂಟು. ಮನುಷ್ಯನು ಕುಡಿದರೇನಾಯಿತು ? ಗೋಹತ್ಯೆಯನ್ನು ಮಾಡಿದರೇನು ? ಮೃತಪ್ರಾಣಿಗಳ ಮಾಂಸವನ್ನು ತಿಂದರೇನಾಯಿತು ? ನಿಶ್ಚಯವಾಗಿ ಅವನು ಪಾಪಿಷ್ಠನೇ ಸರಿ. ಆದರೆ ಗುಪ್ತವಾಗಿ ಅನೇಕ ಭಯಂಕರವಾದ ಪಾಪಗಳನ್ನು ಮಾಡುವ ಮನುಷ್ಯನಷ್ಟೇನೂ ಪಾಪಿ

ಯಲ್ಲ. ಗುಪ್ತ ಪಾಪಿಯನ್ನು ಸಮಾಜವು ಅಸ್ಪೃಶ್ಯನೆಂದು ಬಗೆವುದಿಲ್ಲ. ಅದರಂತೆ ಇವರನ್ನು ಅಸ್ಪೃಶ್ಯರೆಂದು ಬಗೆಯಕೂಡದು. ಪಾಪಿಗಳನ್ನು ತಿರಸ್ಕರಿಸದೆ ಅವರ ವಿಷಯದಲ್ಲಿ ಕನಿಕರಗೊಂಡು ಪಾಪದಿಂದ ಮುಕ್ತರಾಗಲು ಅವರಿಗೆ ಸಾಹಾಯ್ಯ ಮಾಡಬೇಕು. ಹಿಂದು ಸಮಾಜದಲ್ಲಿ ಅಸ್ಪೃಶ್ಯತೆಯ ಅಸ್ತಿತ್ವವು ನಮ್ಮೆಲ್ಲರಿಗೆ ಅಭಿಮಾನಾಸ್ಪದವಾದ ಅಹಿಂಸಾತತ್ವಕ್ಕೆ ಅತ್ಯಂತ ವಿರೋಧವಾಗಿರುವುದು. ನಮ್ಮ ಮಿತ್ರರು ಹೇಳುವ ಅಸ್ಪೃಶ್ಯರಲ್ಲಿ ನೆಲೆಗೊಂಡಿರುವ ದುಷ್ಟ ಪದ್ಧತಿಗಳಿಗೆ ನಾವೇ ಕಾರಣರು ಅವರನ್ನು ದುರ್ಮಾರ್ಗದಿಂದ ಬಿಡಿಸಲು ನಾವೇನು ಪ್ರಯತ್ನ ಮಾಡಿದ್ದೇವೆ ? ನಮ್ಮ ನಮ್ಮ ಕುಟುಂಬಗಳ ಸುಧಾರಣೆಗೋಸುಗ ನಮ್ಮ ಸಂಪತ್ತನ್ನೆ ನಾವು ಈಡಾಡುವುದಿಲ್ಲವೋ ? ಅಸ್ಪೃಶ್ಯರು ನಮ್ಮ ವಿಶಾಲವಾದ ಹಿಂದು ಕುಟುಂಬಕ್ಕೆ ಸೇರಿದವರಿದ್ದಾರೆ. ಅಖಿಲ ಮಾನವ ಜಾತಿಯನ್ನು ಒಂದು ವ್ಯಕ್ತಿಯಾಗಿಯೂ, ಮಾನವಕೋಟಿಯೆಲ್ಲ ಒಂದು ಅವಿಭಕ್ತ ಕುಟುಂಬವಾಗಿಯೂ ತಿಳಿಯಲು ನಿಜವಾಗಿ ಹಿಂದು ಧರ್ಮವು ಕಲಿಸುತ್ತದೆ. ಈ ಕುಟುಂಬದೊಳಗಿನ ಯಾವನೊಬ್ಬನ ಅವಿಚಾರ ಕಾರ್ಯಗಳಿಗೆ ಪ್ರತಿಯೊಬ್ಬರು ಹೊಣೆಗಾರರೆಂದು ಅದು ಹೇಳುತ್ತದೆ. ವಿಶ್ವವನ್ನೇ ಕುಟುಂಬವಾಗಿ ಭಾವಿಸಲು ನಮಗೆ ಆಗದಿದ್ದರೂ, ಅಸ್ಪೃಶ್ಯರನ್ನಾದರೂ ನಮ್ಮ ಕುಟುಂಬದವರೆಂದು ಭಾವಿಸುವ. ಅವರೂ ಹಿಂದುಗಳಾಗಿರುವರು.

ಮೃತಪ್ರಾಣಿಗಳ ಮಾಂಸಭಕ್ಷಣವು ಹೆಚ್ಚು ಹೀನವಾದುದೋ, ದುರ್ವಿಚಾರವು ಹೆಚ್ಚು ಹೀನವಾದುದೋ? ನಮ್ಮ ಅಂತಃಕರಣದಲ್ಲಿ ಲಕ್ಷಾವಧಿ ದುರ್ವಿಚಾರಗಳು ದಿನಾಲು ಹುಟ್ಟುತ್ತವೆ, ಮತ್ತು ಬೆಳೆಯುತ್ತವೆ. ಈ ಅಸ್ಪೃಶ್ಯ ವಿಚಾರಗಳನ್ನೆಲ್ಲ ತೆಗೆದುಹಾಕೋಣ. ನಿಜವಾಗಿಯೂ ಅವೇ ದೂಷಣಾರ್ಹವೂ, ತ್ಯಾಜ್ಯವೂ ಆದ ಅಸ್ಪೃಶ್ಯ ವಸ್ತುಗಳು. ಪ್ರೇಮದಿಂದ ಅಸ್ಪೃಶ್ಯ ಬಾಂಧವರನ್ನು ಅಪ್ಪಿಕೊಂಡು ಅವರ ವಿಷಯದಲ್ಲಿ ನಾವು ಹಿಂದೆ ಮಾಡಿದ ಅನ್ಯಾಯಕ್ಕೋಸುಗ ಪ್ರಾಯಶ್ಚಿತ್ತವನ್ನು ಮಾಡೋಣ. ಅವರ ಸೇವೆಯನ್ನು ಮಾಡುವುದು ನಮ್ಮ ಕರ್ತವ್ಯವೆಂಬ ಮಾತು ನಮ್ಮ ಮಿತ್ರರಿಗೆ ಅಸಮ್ಮತವಲ್ಲ. ಅವರನ್ನು ಮುಟ್ಟುವುದರಿಂದಾಗಲಿ ಇಲ್ಲವೆ ನೋಡುವುದರಿಂದಾಗಲಿ ನಮಗೆ ಮೈಲಿಗೆಯಾಗುವಂತಿದ್ದರೆ ನಾವು ಅವರ ಸೇವೆಯನ್ನು ಮಾಡುವ ಬಗೆ ಹೇಗೆ?

# ಅಸ್ಪೃಶ್ಯತೆಯ ಸಮರ್ಥನೆ.

ತ್ರಾವಣಕೋರದ ಮಿತ್ರರೊಬ್ಬರು ಹೀಗೆ ಬರೆಯುತ್ತಾರೆ—

"ನಿಮಗೆ ಬ್ರಾಹ್ಮಣ ಸಮಾಜದ ಮತ್ತು ಅವರ ರೂಢಿ ಆಚಾರ ಪದ್ಧತಿಗಳ ವಿಷಯದಲ್ಲಿ ತಪ್ಪು ತಿಳಿವಳಿಕೆಯಾದಂತೆ ತೋರುತ್ತದೆ. ನೀವು ಅಹಿಂಸೆಯನ್ನು ಹೊಗಳುತ್ತೀರಿ, ಆದರೆ ಅಹಿಂಸೆಯನ್ನು ಧಾರ್ಮಿಕ ಆಚಾರವೆಂದು ಪಾಲಿಸುವ ಸಮಾಜವೆಂದರೆ ನಮ್ಮ ಬ್ರಾಹ್ಮಣ ಸಮಾಜ ಒಂದೇ. ಅಹಿಂಸೆಯನ್ನು ಪಾಲಿಸದವರು ಬ್ರಾಹ್ಮಣರಲ್ಲಿ ಜಾತಿಬಾಹಿರ ರಾಗುತ್ತಾರೆ; ಜೀವಹಿಂಸಕರ ಮತ್ತು ಮಾಂಸಭಕ್ಷಕರ ಸಹವಾಸವೂ ಪಾಪವೆಂದು ನಾವು ತಿಳಿಯುತ್ತೇವೆ. ಕಟುಕರಾಗಲಿ, ಮೀನುಗಾರ ನಾಗಲಿ, ಹೆಂಡ ತೆಗೆವವನಾಗಲಿ, ಸಮೀಪಕ್ಕೆ ಬಂದರೆ ಮತ್ತು ಮಾಂಸ ಭಕ್ಷಕನ, ಸೆರೆಕುಡುಕನ, ಮತ್ತು ಅಧರ್ಮಿಯ ಸ್ಪರ್ಶವಾದರೆ ನಮ್ಮ ನೈತಿಕ ಮತ್ತು ಶಾರೀರಿಕ ವಾತಾವರಣವು ಅಶುದ್ಧವಾಗುತ್ತದೆ. ಅದ ರಿಂದ ನಮ್ಮ ತಪಸ್ಸೂ ಪುಣ್ಯವೂ ಕಡಿಮೆಯಾಗುತ್ತವೆ; ಪ್ರಭಾವವು ಅಳಿಯುತ್ತದೆ.

"ಇದೆಲ್ಲವನ್ನು ಮೈಲಿಗೆ ಎಂದು ನಾವು ತಿಳಿವುದರಿಂದ ಅದನ್ನು ಕಳೆದುಕೊಳ್ಳಲು ಕೂಡಲೆ ಸ್ನಾನ ಮಾಡಬೇಕಾಗುತ್ತದೆ. ಬ್ರಾಹ್ಮ ಣರು ಇಂಥ ನಿಯಮಗಳನ್ನು ಪಾಲಿಸುವುದರಿಂದಲೇ, ದೇಶಕಾಲ ಪರಿಸ್ಥಿತಿಗಳು ಅತ್ಯಂತ ಭಿನ್ನವಾಗಿದ್ದರೂ, ತಮ್ಮ ಆನುವಂಶಿಕ ಸದ್ಗು ಣಗಳನ್ನು ಇಲ್ಲಿಯವರೆಗೆ ಕಾಯ್ದುಕೊಳ್ಳಲು ಶಕ್ತರಾಗಿದ್ದಾರೆ. ಈ ನಿಯಮಗಳ ಬಂಧನವಿಲ್ಲದೆ ಬ್ರಾಹ್ಮಣನು ಅಸ್ಪೃಶ್ಯರೊಡನೆ ಅನಿರ್ಬಂಧ ವಾದ ಸಂಪರ್ಕವನ್ನು ಬಳಸಿದರೆ ಅವನು ಕ್ರಮೇಣ ಬಹಿಷ್ಕೃತರಲ್ಲಿಯೂ ಅತ್ಯಂತ ಕೀಳರಿಗೆ ಸಮಾನನಾಗುವನು. ಗೌಪ್ಯವಾಗಿ ಅವರ ದುರಾ ಚಾರಗಳಲ್ಲಿ ಅವನು ಮಗ್ನನಾಗದಿರನು. ಅವನ ಪಾಪದ ಆಚರಣೆಗೆ ಆತಂಕವಾಗಿದ್ದ ನಿಯಮಗಳನ್ನುಲ್ಲಂಘಿಸಲು ಪ್ರಯತ್ನಿಸುವಾಗಲೂ ತಾನು ಪವಿತ್ರನಾಗಿಯೇ ಇರುವೆನೆಂದು ತೋರಿಸಲು ಹವಣಿಸುವನು. ಈಗ ಹೆಸರಿಗೆ ಮಾತ್ರ ಬ್ರಾಹ್ಮಣರಾಗಿರುವ ಅನೇಕರು ಹೀಗಿರುವುದು

ನಮಗೆ ಗೊತ್ತುಂಟು. ಅವರು ತಮ್ಮಂತೆ ಇತರರನ್ನು ತಾವಿರುವ ಕೀಳು ದೆಸೆಗೆ ಎಳೆಯಲು ವಿಶ್ವಪ್ರಯತ್ನವನ್ನು ಮಾಡುತ್ತಿರುವರು.

"ಪಾಶ್ಚಾತ್ಯರಲ್ಲಿ ಬಣ್ಣ, ಧನ, ಅಧಿಕಾರಗಳ ಮೇಲಿಂದ ಅನ್ಯಾಯವಾಗಿ ಬೇರೆ ಬೇರೆ ಪಂಗಡಗಳು ವಿಂಗಡಿಸಲ್ಪಟ್ಟಂತೆ ನಮ್ಮಲ್ಲಿ ಆಗಿರುವುದಿಲ್ಲ. ನಮ್ಮಲ್ಲಿಯ ಪಂಗಡಗಳು ಆಚಾರ, ವಿಚಾರ, ಚಟ, ಶೀಲ, ಇವುಗಳನ್ನು ಅವಲಂಬಿಸಿರುವವು. ಅಲ್ಲದೆ ಅವು ಬೇರೆ ಬೇರೆ ಪ್ರಾಂತಗಳಲ್ಲಿ ತಮ್ಮ ಉದ್ಯೋಗಕ್ಕೂ ಸಾಮಾಜಿಕ ಮತ್ತು ಕೌಟುಂಬಿಕ ಸೌಕರ್ಯಗಳಿಗೂ ಅನುಕೂಲವಾಗುವಂತೆ ಸಹಜವಾಗಿ ಕಂಡುಬರುವ ಭೇದಗಳೊಡನೆ ಮಾರ್ಪಟ್ಟಿವೆ. ಆದುದರಿಂದ ನಮ್ಮ ನಾಡಿನಲ್ಲಿ ಯಾವನೊಬ್ಬನು ತನ್ನ ನಡತೆಯನ್ನು ಬದಲಾಯಿಸಿದರೆ ಅದು ಜನರ ದೃಷ್ಟಿಯಲ್ಲಿ ಬಾರದೆ ಬಹುದಿವಸ ಉಳಿಯಲಾರದು.

"ಆದರೆ ಕಟುಕರ ಅಥವಾ ಮಾಂಸಭಕ್ಷಕರ ಮತ್ತು ಕುಡಕರ ಮಧ್ಯದಲ್ಲಿ ವಾಸಿಸುವುದಾದರೆ ತನ್ನ ಪೂರ್ವದ ಸದ್ಗುಣಗಳನ್ನು ಕಾಯ್ದುಕೊಳ್ಳುವುದು ಅಸಾಧ್ಯವಾಗುವುದು. ನಮ್ಮ ಅಭಿರುಚಿಗಳಿಗೆ ತಕ್ಕ ವಾತಾವರಣವನ್ನೇ ನಾವು ಸ್ವಾಭಾವಿಕವಾಗಿ ಹುಡುಕುತ್ತೇವೆ. ಆದುದರಿಂದ ಬ್ರಾಹ್ಮಣರ ವಸತಿಗಳ ಸುತ್ತಮುತ್ತಲಿನ ವಾತಾವರಣವು ನೈತಿಕ, ಶಾರೀರಕ ಮತ್ತು ಧಾರ್ಮಿಕ ದೃಷ್ಟಿಗಳಿಂದ ಪವಿತ್ರವಾಗಿರುವುದು ಅವಶ್ಯವು. ಅಲ್ಲಿ ಕೂಲೆಗಡಕರು, ಮೀನುಗುಲಿಗಳು, ಸಿಂದಿ ತೆಗೆಪವರು ಇವರೇ ಮೊದಲಾದವರು ಬಾರದಂತೆ ಎಚ್ಚರಪಡತಕ್ಕದ್ದು.

"ಹಿಂದುಸ್ಥಾನದಲ್ಲಿ ಉದ್ಯೋಗವೂ ಜಾತಿಯೂ ಒಂದನ್ನೊಂದು ಅಂಟಿಕೊಂಡಿವೆ. ಆದುದರಿಂದ ಒಂದು ವಿಶಿಷ್ಟವಾದ ಜಾತಿಗೆ ಸೇರಿದವನು ಆ ಜಾತಿಯ ಉದ್ಯೋಗವನ್ನೇ ಮಾಡುತ್ತಾನೆಂದು ನಂಬುವುದು ಸ್ವಾಭಾವಿಕವಾಗಿದೆ.

"ಇವೆಲ್ಲ ಕಾರಣಗಳಿಂದ ಅಸ್ಪೃಶ್ಯತೆ ನಮ್ಮಲ್ಲಿ ನೆಲೆಗೊಂಡದ. ಮೇಲೆ ಹೇಳಿದಂತೆ ಇವು ನಮ್ಮ ವರ್ಗದ ಪವಿತ್ರತೆಯನ್ನು ಕಾಯುವವು. ಅಲ್ಲದೆ, ಸಾಮಾಜಿಕ ಅಥವಾ ಧಾರ್ಮಿಕ ಬಹಿಷ್ಕಾರ ರೂಪದ 'ದಂಡನೆಯಿಂದ ತಪ್ಪುಗಾರರ ಮೇಲೆ ಪ್ರತ್ಯಕ್ಷ ಪರಿಣಾಮವನ್ನು ಮಾಡುವದು.

ಮತ್ತು ಅವರು ನಮ್ಮ ಸ್ವತಂತ್ರವಾದ ಸಂಬಂಧವನ್ನಿಟ್ಟುಕೊಳ್ಳಬೇಕಾದರೆ ಅವರು ತಮ್ಮ ದುರಭ್ಯಾಸಗಳನ್ನೆಲ್ಲ ಬಿಡಬೇಕೆಂದು ಅಪ್ರತ್ಯಕ್ಷವಾಗಿ ಅವರ ಮನವೊಲಿಸುತ್ತದೆ.

"ಆದುದರಿಂದ ಅವರು ತಮ್ಮ ಪಾಪಕೃತ್ಯಗಳನ್ನು ಬಿಟ್ಟು ನೂಲುವ ನೆಯ್ಯುವ ಉದ್ಯೋಗಗಳನ್ನು ಕೈಕೊಳ್ಳಬೇಕೆಂದೂ, ಸ್ನಾನ, ಉಪವಾಸ, ಪ್ರಾರ್ಥನೆ, ಸ್ವಚ್ಛತೆ ಮುಂತಾದ ಅವಶ್ಯಕವಾದ ಧಾರ್ಮಿಕ ಬಂಧನಗಳನ್ನು ಪಾಲಿಸಬೇಕೆಂದೂ ನೀವು ಅವರಿಗೆ ಬಹಿರಂಗವಾಗಿ ಹೇಳಬೇಕು. ಅವರು ತಮ್ಮ ಅಸ್ಪೃಶ್ಯತೆಯನ್ನು ಸ್ವಲ್ಪಾವಧಿಯಲ್ಲಾದರೂ ಕಳೆದುಕೊಳ್ಳಬೇಕಾದರೆ ಇದು ಅತ್ಯವಶ್ಯವಾದ ಮಾರ್ಗವು. ತಮ್ಮ ಹಳೆಯ ಆಚಾರ ವಿಚಾರಗಳನ್ನು ಸುಧಾರಿಸಿಕೊಳ್ಳದಿದ್ದವರೊಡನೆ ಅವರು ತಮ್ಮ ಸಂಬಂಧವನ್ನು ಇಡಲಾಗದು. ಇದು ಶಾಸ್ತ್ರಸಮ್ಮತವಾದ ಪಥವು. ಯಾವನೊಬ್ಬನ ಗೌಪ್ಯವಾದ ವೈಯಕ್ತಿಕ ಪಾಪ ಪುಣ್ಯಗಳನ್ನು ಪರೀಕ್ಷಿಸುವ ಮಾರ್ಗಗಳು ಇಲ್ಲವಾದುದರಿಂದ ಇಂತಹನೊಬ್ಬನು ಪುಣ್ಯವಂತನು, ಇಂತಹನೊಬ್ಬನು ಪಾಪಿಷ್ಠನು ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಯಾವನೊಬ್ಬನ ಬಾಹ್ಯಾಚರಣೆಗಳಿಂದ ಅವನ ಅಂತರಂಗದ ಸ್ವಭಾವವು ಹೀಗೆ ಅಥವಾ ಹಾಗೆ ಇರಬಹುದೆಂದು ನಾವು ನಿರ್ಧರಿಸುತ್ತೇವೆ. ಆದುದರಿಂದ ಅಹಿಂಸಾಧರ್ಮವನ್ನು ಬಹಿರಂಗವಾಗಿ ಅಪ್ಪಿಕೊಳ್ಳದವನು ಅಥವಾ ಮೀನು ಮಾಂಸಭಕ್ಷಣಗಳನ್ನು ಬಿಡುವವರೆಗಾದರೂ ಆನುವಂಶಿಕವಾಗಿ ಬಂದ ಅಸ್ಪೃಶ್ಯತೆಯ ಎಲ್ಲೆಯನ್ನು ದಾಟಲು ಅರ್ಹನೆಂದು ತಿಳಿಯಲಾಗದು. ನಿಜವಾಗಿಯೂ ಈ ಅಸ್ಪೃಶ್ಯತೆ ಅಹಿಂಸಾಧರ್ಮ ಸಂರಕ್ಷಣೆಗೂ ಮತ್ತು ಪ್ರಸಾರಕ್ಕೂ ಅತ್ಯಂತ ವ್ಯವಹಾರಕವಾದ ಮಾರ್ಗವು."

ಈ ಪ್ರಶ್ನೆಗಳು ಅನೇಕ ಬಾರೆ ಚರ್ಚಿಸಲ್ಪಟ್ಟಿವೆ. ಆದರೂ ಅವುಗಳಲ್ಲಿ ಅಡಕವಾಗಿರುವ ಆಭಾಸಗಳನ್ನು ಮತ್ತೊಮ್ಮೆ ತೋರಿಸುವುದು ಅವಶ್ಯವಾಗಿರುವುದು. ಮೊದಲನೆಯದಾಗಿ, ಬ್ರಾಹ್ಮಣರು ಕೇವಲ ಶಾಕಾಹಾರಿಗಳೆಂಬ ಮಾತು ಸಂಪೂರ್ಣ ಸತ್ಯವಲ್ಲ. ದಕ್ಷಿಣದ ಬ್ರಾಹ್ಮಣರು ಮಾತ್ರ ಕೇವಲ ಶಾಕಾಹಾರಿಗಳು. ಆದರೆ ಉಳಿದ ಕಡೆಗಳಲ್ಲಿ ಬ್ರಾಹ್ಮಣರು ಮೀನವನ್ನು ತಿನ್ನುತ್ತಾರೆ. ಬಂಗಾಲ ಕಾಶ್ಮೀರಗಳಲ್ಲಿ ಬ್ರಾಹ್ಮ

ಣರು ಮಾಂಸವನ್ನೂ ತಿನ್ನುತ್ತಾರೆ. ಇದಲ್ಲದೆ ದಕ್ಷಿಣದಲ್ಲಿಯೂ ಮೀನ ಮತ್ತು ಮಾಂಸ ಭಕ್ಷಕರು ಬ್ರಾಹ್ಮಣರಿಗೆ ಅಸ್ಪೃಶ್ಯರಾಗಿರುವುದಿಲ್ಲ. ಮತ್ತು ಅತ್ಯಂತ ಪಂಡಿತನಾದವನೂ 'ಅಸ್ಪೃಶ್ಯ' ರಲ್ಲಿ ಹುಟ್ಟಿದ್ದೊಂದೇ ಕಾರಣದಿಂದ ಅಸ್ಪೃಶ್ಯನಾಗಿ ಎಣಿಸಲ್ಪಡುತ್ತಿರುವನು. ಮಾಂಸಭಕ್ಷಕರಾದ ಹಿಂದು ರಾಜಮನೆತನದವರ ಸೇವೆಯನ್ನು ಬ್ರಾಹ್ಮಣರು ಕೈಕೊಳ್ಳುವುದಿಲ್ಲವೋ ?

ನಮ್ಮ ಈ ಪತ್ರಲೇಖಕರಂತಹ ಸುಸಂಸ್ಕೃತರು ಅಸಮರ್ಥನೀಯವೂ ಪತನೋನ್ಮುಖವೂ ಆದ ಈ ಪದ್ಧತಿಯನ್ನು ಸಮರ್ಥಿಸಲು ಉತ್ಸಾಹದಿಂದ ಮುಂದೆ ಬರುವುದು ಸಖೇದಾಶ್ಚರ್ಯವು. ಅವರ ಈ ವಿಚಾರಸರಣಿಯಿಂದಾಗಬಹುದಾದ ಪರಿಣಾಮಗಳನ್ನು ಅವರು ಮರೆತಂತೆ ತೋರುತ್ತದೆ. ನಮ್ಮ ಮಿತ್ರರು ಕಾಲ್ಪನಿಕ ಶುದ್ಧತೆಗೋಸುಗ ಮಾಂಸ ಭಕ್ಷಣದಂತಹ ಕ್ಷುದ್ರವಾದ ಮಾತಿಗೆ ಇಲ್ಲದ ಮಹತ್ವವನ್ನು ಕೊಟ್ಟು, ಸಾವಿರಾರು ಮಾನವ ಪ್ರಾಣಿಗಳನ್ನು ಬುದ್ಧಿಪುರಸ್ಸರವಾಗಿ ನಾವು ಕೆಳಗೆ ಹತ್ತಿಕ್ಕುತ್ತಿರುವ ಅಕ್ಷಮ್ಯವಾದ ಹಿಂಸೆಯನ್ನು ದುರ್ಲಕ್ಷಿಸುವರು. ಶಾಕಾಹಾರದ ಶುದ್ಧತೆಯನ್ನು ಕಾಯ್ದುಕೊಳ್ಳಲು ಅನ್ಯರನ್ನು ತುಳಿವುದೂ, ಬಹಿಷ್ಕರಿಸಿ ಅಪಮಾನಗೊಳಿಸುವುದೂ, ಅವಶ್ಯಕವಾಗಿದ್ದರೆ ಅಂತಹ ಶಾಕಾಹಾರವು ನಿರುಪಯುಕ್ತವಾದುದೆಂದು ನಾನು ಸೂಚಿಸದಿರಲಾರೆ. ಹೀಗೆ ರಕ್ಷಿಸಲ್ಪಟ್ಟ ಶಾಕಾಹಾರವೆಷ್ಟುದಿನ ಬಾಳುವುದು? ನಾನು ಶಾಕಾಹಾರಕ್ಕೆ ಮಹತ್ವನ್ನೀಯುತ್ತೇನೆ. ಶಾಕಾಹಾರದಿಂದ ಮತ್ತು ಆತ್ಮನಿಗ್ರಹ ಪೋಷಕವಾದ ಕೆಲ ನಿಯಮಗಳ ಪಾಲನೆಯಿಂದ ಬ್ರಾಹ್ಮಣರು ಆಧ್ಯಾತ್ಮಿಕ ಪ್ರಗತಿಯನ್ನು ಪಡೆದಿರುವುದು ನಿಜವು. ಬ್ರಾಹ್ಮಣರು ಅತ್ಯುಚ್ಚ ಸ್ಥಿತಿಯಲ್ಲಿರುತ್ತಿರುವಾಗ ಶುದ್ಧತೆಯನ್ನು ಕಾಯ್ದುಕೊಳ್ಳಲೋಸುಗ ಸ್ಪೃಶ್ಯಾಸ್ಪೃಶ್ಯತೆಯ ನಿಯಮಗಳನ್ನು ಕಲ್ಪಿಸಲು ಅವಶ್ಯವಿರಲಿಲ್ಲ. ಬಾಹ್ಯ ವಾತಾವರಣದ ಪರಿಣಾಮಗಳನ್ನು ತಡೆಯಲು ಅಸಮರ್ಥವಾದ ಸದ್ಗುಣವು ಸತ್ವಹೀನವಾದುದೆನ್ನಬಹುದು.

ಅಲ್ಲದೆ ನನ್ನ ಈ ಮಿತ್ರರು ಹೇಳುವಂತೆ ಅಸ್ಪೃಶ್ಯತೆಯ ನಿಯಮಗಳನ್ನು ಪಾಲಿಸಿ ಬ್ರಾಹ್ಮಣರು ತಮ್ಮ ಶುದ್ಧತೆಯನ್ನು ಕಾಯ್ದುಕೊಳ್ಳುವ

ದಿವಸಗಳು ಹೋದವು. ಈ ಬಗೆಯಾಗಿ ಶುದ್ಧತೆಯನ್ನು ಕಾಯ್ದುಕೊಳ್ಳುವ ಪದ್ಧತಿಯನ್ನು ತಿರಸ್ಕರಿಸುವ ಬ್ರಾಹ್ಮಣರ ಸಂಖೆ ಸುದೈವದಿಂದ ಹೆಚ್ಚುತ್ತ ನಡೆದಿರುವುದು. ಅವರು ಯಾವ ಬಗೆಯ ಸಂಕಟಗಳಿಗೂ ಹೆದರದೆ ಅಸ್ಪೃಶ್ಯತಾ ನಿವಾರಣೆಯ ಕಾರ್ಯವನ್ನು ಕೈಕೊಳ್ಳಲು ಸಿದ್ಧರಾಗಿದ್ದಾರೆ. ಇದರಲ್ಲಿಯೇ ಸುಧಾರಕನ ಪ್ರಗತಿಯ ಆಶೆ ಕಾಣಬರುವುದು.

ಪತಿತರಲ್ಲಿ ಪವಿತ್ರತೆ ಬರುವಂತೆ ಉಪದೇಶಿಸಲು ನಮ್ಮ ಮಿತ್ರರು ನನಗೆ ಹೇಳುತ್ತಾರೆ. ಅವರು 'ಯಂಗ ಇಂಡಿಯಾ' ಪತ್ರವನ್ನೋದುವಂತೆ ತೋರುವುದಿಲ್ಲ. ಇಲ್ಲವಾದರೆ ಅಸ್ಪೃಶ್ಯರಿಗೆ ಪವಿತ್ರತೆಯನ್ನು ಬೋಧಿಸುವ ಒಂದೂ ಪ್ರಸಂಗವನ್ನು ನಾನು ಕಳೆದುಕೊಳ್ಳುವುದಿಲ್ಲನೆಂಬದು ಅವರಿಗೆ ಗೊತ್ತಾಗುತ್ತಿದ್ದಿತು. ನನ್ನ ಪ್ರಯತ್ನಗಳಿಗೆ ತಕ್ಕ ಫಲವಾಗಿ ಅಸ್ಪೃಶ್ಯರಲ್ಲಿ ಯೋಗ್ಯ ಆಚರಣೆ ಕಂಡುಬರುತ್ತಲಿದೆ ಎಂಬ ಸಂಗತಿಯನ್ನು ಅವರು ತಿಳಿಯಲಿ. ಬಹುದಿವಸದಿಂದ ಬಳಲುತ್ತಿರುವ ಈ ಜನರ ಮಧ್ಯದಲ್ಲಿ ಸುಧಾರಕರೊಡನೆ ತಾವೂ ಹೋಗಿ ನೋಡಬೇಕೆಂದು ನಾನು ಅವರನ್ನು ಬೇಡಿಕೊಳ್ಳುತ್ತೇನೆ. ತಾವು ಅಸ್ಪೃಶ್ಯರ ಒಡೆಯರಂತೆ ವರ್ತಿಸುವುದನ್ನು ಬಿಟ್ಟು ಅವರ ಮಿತ್ರರಂತೆ ನಡೆಯಬೇಕೆಂದು ನಾನು ಅವರಿಗೆ ಸೂಚಿಸುತ್ತೇನೆ.

---

# ಜಾತಿಯ ಅಪರಾಧ.

ದಕ್ಷಿಣ ಆಫ್ರಿಕೆಯಲ್ಲಿ ನಮ್ಮ ಬಣ್ಣದ ತಪ್ಪಿಗೋಸುಗ ನಾವು ಶಿಕ್ಷೆಯನ್ನನುಭವಿಸಬೇಕಾಗುತ್ತದೆ. ಆದರೆ ಭಾರತದಲ್ಲಿ ಹಿಂದುಗಳಾದ ನಾವು ನಮ್ಮ ಸಹಧರ್ಮಿಗಳನ್ನು ಜಾತಿಯ ತಪ್ಪಿಗೋಸುಗ ಶಿಕ್ಷಿಸುತ್ತೇವೆ. ಐದನೆಯ ಜಾತಿಯವರಾದ ಪಂಚಮರು ನಮ್ಮ ಕಣ್ಣಲ್ಲಿ ಮಹಾ ಅಪರಾಧಿಗಳು. ನಾವು ಅವರಿಗೆ ಅಸ್ಪೃಶ್ಯತೆಯ ಶಿಕ್ಷೆಯನ್ನು ವಿಧಿಸಿದ್ದೇವೆ. ಮದ್ರಾಸ ಪ್ರಾಂತದ ಕೋರ್ಟಿನಲ್ಲಿ ನಡೆದ ಒಂದು ಅಸಾಮಾನ್ಯ ಉದಾಹರಣೆಯಿಂದ ನಮ್ಮ ನಾಡಿನ ಪತಿತರ ದುಃಖಮಯವಾದ ಸ್ಥಿತಿ ಸ್ಪಷ್ಟವಾಗಿ ಕಾಣಬರುತ್ತದೆ. ಸ್ವಚ್ಛವಾದ ಬಟ್ಟೆಗಳನ್ನು ಧರಿಸಿದ ಸರಳ ಜೀವಿಯಾದ ಪಂಚಮನೊಬ್ಬನು ಅತ್ಯಂತ ಭಕ್ತಿಯಿಂದ ಒಂದು ದೇವಾಲಯವನ್ನು ಪ್ರವೇಶಿಸಿದನು. ಉಳಿದವರ ಮನಸ್ಸು ನೋಯಿಸಲಿಕ್ಕೆ ಅಥವಾ ಅಪಮಾನಗೊಳಿಸಲಿಕ್ಕೆ ಅವನೆಷ್ಟೂ ಇಚ್ಛಿಸಿರಲಿಲ್ಲ. ಪ್ರತಿವರ್ಷವೂ ಅವನು ದೇವಾಲಯದೊಳಗೆ ಪ್ರವೇಶಿಸದೆ ಹೊರಗಿನಿಂದಲೇ ತನ್ನ ಮುಡುಪನ್ನು ದೇವರಿಗೆ ಸಲ್ಲಿಸುತ್ತಿದ್ದನು. ಆದರೆ ಒಂದು ಸಲ ಭಕ್ತಿಯ ಆವೇಶದಲ್ಲಿ ಮೈಮರೆದು ಗುಡಿಯೊಳಗೆ ಪ್ರವೇಶಿಸಿದನು. ಅವನು ಪಂಚಮನೆಂದು ಅರ್ಚಕನಿಗೆ ಗೊತ್ತಾಗದೆ ಅವನ ಮುಡುಪನ್ನು ಅರ್ಚಕನು ಸ್ವೀಕರಿಸಿದನು. ಆದರೆ ಪಂಚಮನಿಗೆ ಎಚ್ಚರವಾದ ಬಳಿಕ ಅಸ್ಪೃಶ್ಯರು ಬರಕೂಡದ ಸ್ಥಳದಲ್ಲಿ ನಾನು ಬಂದಿರುವೆನೆಂದು ತಿಳಿದು ಒಮ್ಮೆಲೆ ದೇವಾಲಯದೊಳಗಿಂದ ಹೊರಗೆ ಓಡಿದನು. ಅವನನ್ನು ಬಲ್ಲ ಕೆಲವರು ಕೂಡಲೆ ಅವನನ್ನು ಗುರ್ತಿಸಿ, ಹಿಡಿದು ಪೋಲೀಸರ ವಶಕ್ಕೆ ಒಪ್ಪಿಸಿದರು. ಅವನ ಈ ಅಪರಾಧವು ದೇವಾಲಯದ ಅಧಿಕಾರಿಗಳಿಗೆ ತಿಳಿದ ಕೂಡಲೆ ಅವರು ದೇವಾಲಯವನ್ನು ಶುದ್ಧ ಮಾಡಿದರು. ಮುಂದೆ ಕೋರ್ಟಿನಲ್ಲಿ ಅವನ ವಿರುದ್ಧ ವ್ಯಾಜ್ಯ ಹೂಡಿದರು. ಅವನು ತನ್ನ ಧರ್ಮದ ಅಪಮಾನ ಮಾಡಿದನೆಂದು ಮ್ಯಾಜಿಸ್ಟ್ರೇಟರು ಅವನಿಗೆ ೭೫ರೂಪಾಯಿ ದಂಡವನ್ನು ಇಲ್ಲವೆ ಒಂದು ತಿಂಗಳ ಸಶ್ರಮ ಶಿಕ್ಷೆಯನ್ನು ವಿಧಿಸಿದರು. ಮುಂದೆ ಇದರ ಅಪೀಲು ನಡೆಯಿತು. ವಿಶದವಾದ ತನಿಖೆಗಳು ನಡೆದು ತೀರ್ಮಾ

ಹಕಾರವೆಂದರೇನೆಂಬುದು ಆ ಪಂಚಮನಿಗೆ ಗೊತ್ತಿರಲಿಲ್ಲ. ತನಗೆ ದಂಡವೂ ಶಿಕ್ಷೆಯೂ ತಪ್ಪಬೇಕೆಂದು ಅವನು ಅಪೀಲು ಮಾಡಿದ್ದನು. ಪ್ರತಿಯೊಬ್ಬ ಸುಶಿಕ್ಷಿತ ಹಿಂದುವು ತಾನು ಅಸ್ಪೃಶ್ಯರ ಮಿತ್ರನೆಂದು ತಿಳಿದು ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಅನ್ಯಾಯದಿಂದ ಅವರನ್ನು ಮುಕ್ತಗೊಳಿಸುವದು ತನ್ನ ಕರ್ತವ್ಯವೆಂದು ತಿಳಿಯತಕ್ಕದ್ದು. **ಪಂಚಮನು ದೇವಾಲಯದಲ್ಲಿ ಪ್ರವೇಶ ಮಾಡುವುದರಿಂದ ಧರ್ಮಕ್ಕೂ ಮಾನವ ಜಾತಿಗೂ ಅವಮಾನವಾಗುವುದಿಲ್ಲ ಆದರೆ ಅವನು ದೇವಾಲಯದಲ್ಲಿ ಪ್ರವೇಶಿಸಕೂಡದೆಂಬ ವಿಧಿಯಿಂದ ಮಾತ್ರ ಧರ್ಮದ ಅವಮಾನವಾಗುತ್ತದೆ.**